CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜನವರಿ ೨೦, ೨೦೦೫ (ಪುಷ್ಯ ೩೦, ಶಕ ವರ್ಷ ೧೯೨೬) | ಸಂಚಿಕೆ ೩ |
|---|---|---|



## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಪೊಲೀಸ್ ಇನ್ಸ್‌ಪೆಕ್ಟರ್, ಏರ್‌ಪೋರ್ಟ್ ಪೊಲೀಸ್ ಸ್ಟೇಷನ್, ಬೆಂಗಳೂರು-17

**ಉಲ್ಲೇಖ :** ಏರ್‌ಪೋರ್ಟ್ ಪೊಲೀಸ್ ಠಾಣೆ ಮೊ. ನಂ. 186/04 ಕಲಂ 379 ಐಪಿಸಿ. 22807/04.

ಮೇಲ್ಕಂಡ ವಿಷಯ ಮತ್ತು ಉಲ್ಲೇಖನಕ್ಕೆ ಸಂಬಂಧಿಸಿದಂತೆ ಏರ್‌ಪೋರ್ಟ್ ಪೊಲೀಸ್ ಸ್ಟೇಷನ್‌ನಲ್ಲಿ ಠಾಣೆ ಮೊ. ನಂ. 186/04 ಕಲಂ 379 ಐಪಿಸಿ ಕೇಸಿನಲ್ಲಿ ಆರೋಪಿಯಾದ ಸೀನ ಅಲಿಯಾಸ್ ಶ್ರೀನಿವಾಸ ಬಿನ್ ರಾಮು 50 ವರ್ಷ ನಂ. 22, ಭಾಗ್ಯ ಲೇಔಟ್, ತಂಬುಚೆಟ್ಟಿ ಪಾಳ್ಯ ಕೆ.ಆರ್.ಪುರ ಬೆಂಗಳೂರು ಎಂಬುವನನ್ನು ದಿನಾಂಕ: 5.9.04 ರಂದು ದಸ್ತಗಿರಿ ಮಾಡಿ ಈತನು ನೀಡಿದ ಮಾಹಿತಿ ಮೇರೆಗೆ ಈತನ ಮನೆಯ ಹತ್ತಿರದಿಂದ ಒಂದು ಮಾರುತಿ ಒಮಿನಿ ವ್ಯಾನ್ ನಂ. ಕೆ.ಎ. 15-1745 ಅನ್ನು ಅಮಾನತ್ತು ಪಡಿಸಿಕೊಂಡಿದ್ದು ಸದರಿ ವಾರಸುದಾರರು ಪತ್ತೆಯಾಗದ ಕಾರಣ ನಗರದಲ್ಲಿ ಯಾವುದಾದರೂ ಪೊಲೀಸ್ ಠಾಣಾ ಸರಹದ್ದಿನಲ್ಲಿ ಕಳುವಾಗಿ ವರದಿಯಾಗಿರಬಹುದುದೆಂದು ಬೆಂಗಳೂರು ನಗರದ ಪೊಲೀಸ್ ಠಾಣೆಗಳಿಗೆ ಸುತ್ತೋಲೆಯನ್ನು ಕಳುಹಿಸಲಾಗಿ ಸದರಿ ವ್ಯಾನು ಯಾವ ಪೊಲೀಸ್ ಠಾಣೆಯಲ್ಲಿಯೂ ವರದಿಯಾಗಿರುವುದಿಲ್ಲ. ಹಾಗೂ ವಾರಸುದಾರರೂ ಸಹ ಪತ್ತೆಯಾಗಿರುವುದಿಲ್ಲ ಆದುದರಿಂದ ಈ ಕೇಸಿನ ಮಾಲಿನ ವಾರಸುದಾರರು ಪತ್ತೆಯಾಗದ ಕಾರಣ ಇದನ್ನು ಗೆಜೆಟ್ ನೋಟಿಫಿಕೇಶನ್ ಹೊರಡಿಸಲು ಅನುಮತಿಗಾಗಿ ವರದಿಯನ್ನು ದಿನಾಂಕ: 29.11.04 ರಂದು ನಿವೇದಿಸಿಕೊಂಡಿದ್ದು ಮಾನ್ಯ ನ್ಯಾಯಾಲಯವು ಸದರಿ ನಂಬರಿಗೆ ಸಂಬಂಧಪಟ್ಟ ಆರ್.ಟಿ.ಒ. ಕಛೇರಿಗೆ ಕಳುಹಿಸಿ ಪರಿಶೀಲಿಸಬೇಕೆಂದು ಸೂಚನೆ ನೀಡಿದ ಮೇರೆಗೆ ಸದರಿ ವ್ಯಾನಿನ ನಂಬರ್ ಶಿವಮೊಗ್ಗ ಜಿಲ್ಲೆಯ ಸಾಗರದ ಪ್ರಾದೇಶಿಕ ಸಾರಿಗೆ ಕಛೇರಿಯಾಗಿದ್ದು ಅಲ್ಲಿಗೆ ಸಿಬ್ಬಂದಿಯನ್ನು ಕಳುಹಿಸಿ ಪರಿಶೀಲಿಸಲಾಗಿ ಸದರಿ ಕೆ.ಎ. 15-1745 ನಂಬರ್ ಮಾರುತಿ ಒಮಿನಿ ವ್ಯಾನ್‌ನದಲ್ಲ ಇದು ಲಕ್ಸುರಿ ಟಾಕ್ಸಿ (ಅಂಬಾಸಿಡರ್) ಆಗಿರುತ್ತೆ ಇದರ ಮಾಲಿಕರ ಹೆಸರು ಮೃತ್ಯುಂಜಯಪ್ಪ ಜೆ. ಎಂದು ತಿಳಿಸಿ ವರದಿ ನೀಡಿರುತ್ತಾರೆ.

ಆದುದರಿಂದ ಸದರಿ ಮಾರುತಿ ಒಮಿನಿ ವ್ಯಾನಿನ ನಂಬರ್ ಬೇರೆಯಾಗಿದ್ದು ಇದರ ವಾರಸುದಾರರು ಪತ್ತೆಯಾಗಿಲ್ಲದ ಕಾರಣ ಈ ಮೂಲಕ ಸಾರ್ವಜನಿಕರಿಗೆ ಮಾಹಿತಿಗಾಗಿ ಈ ಪ್ರಕಟಣೆಯನ್ನು ಪ್ರಕಟಿಸಲಾಗಿದೆ.

ಪೊಲೀಸ್ ಇನ್ಸ್‌ಪೆಕ್ಟರ್, ಏರ್‌ಪೋರ್ಟ್ ಪೊಲೀಸ್ ಸ್ಟೇಷನ್,
ಬೆಂಗಳೂರು-17

PR-65

### ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿಯ ನಡವಳಿಗಳು ಬೆಂಗಳೂರು

**ವಿಷಯ :** ಶ್ರೀ ಆರ್. ಎನ್. ಪಠಾಣ್, ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. 1ನೇ ನ್ಯಾಯಾಲಯ, ಗದಗ್, ಇವರನ್ನು ವಿಚಾರಣೆ ಬಾಕಿ ಇರಿಸಿ ಸೇವೆಯಿಂದ ಅಮಾನತ್ತಿನಲ್ಲಿಡುವ ಕುರಿತು.

**ಉಲ್ಲೇಖ :** ಸರ್ಕಾರಿ ಅಭಿಯೋಜಕರು, ಗದಗ್, ಇವರ ಫ್ಯಾಕ್ಸ್ ಸಂದೇಶ ಪತ್ರ ದಿನಾಂಕ: 17.12.2004.

**ಪ್ರಸ್ತಾವನೆ:**

ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗದಗ್, ಇವರು ದಿನಾಂಕ: 17.12.2004 ರಂದು ಈ ಕಛೇರಿಗೆ ಸಲ್ಲಿಸಿರುವ ಉಲ್ಲೇಖಿತ ಫ್ಯಾಕ್ಸ್ ಸಂದೇಶದಲ್ಲಿ, ದಿನಾಂಕ: 15.12.2004 ರಂದು ಮಧ್ಯಾಹ್ನ 2.00 ಘಂಟೆ ಸುಮಾರಿಗೆ, ಶ್ರೀ ಆರ್. ಎನ್. ಪಠಾಣ್, ಸಹಾಯಕ

ಸರ್ಕಾರಿ ಅಭಿಯೋಜಕರು, 1ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ಗದಗ್, ಇವರ ಮೇಲೆ ಶ್ರೀ ಅಬ್ದುಲ್ ಹಮೀದ್ ನಜೀರ್ ಅಹ್ಮದ್ ಶಾಲಗಾರ, ಇವರು ಗದಗ್ ಲೋಕಾಯುಕ್ತ ನಿರೀಕ್ಷಕರಿಗೆ ನೀಡಿದ ದೂರಿನ ಆಧಾರದ ಮೇಲೆ ಲೋಕಾಯುಕ್ತ ಪೊಲೀಸರು ಬೀಸಿದ ಬಲೆಗೆ ಅಕ್ರಮ ಸಂಭಾವನೆ ಸ್ವೀಕರಿಸುವ ಕಾಲಕ್ಕೆ ಸದರಿ ಶ್ರೀ ಆರ್. ಎನ್. ಪಠಾಣ್, ಇವರು ಸಿಕ್ಕುಬಿದ್ದು, ಅವರ ಮೇಲೆ ಗದಗ ಲೋಕಾಯುಕ್ತ ಪೊಲೀಸರು ಗುನ್ನೆ ನಂ. 2:04, ಕಲಂ 7, 13 (1) (ಡಿ) ಸಹ ಕಲಂ 13(2) ಪಿ.ಸಿ. ಕಾಯಿದೆ 1988ರ ಮೇರೆಗೆ ಪ್ರಕರಣವನ್ನು ದಾಖಲು ಮಾಡಿಕೊಂಡಿರುವುದಾಗಿ ಹಾಗೂ ಸದರಿ ಅಧಿಕಾರಿಯನ್ನು ಬಂಧಿಸಿ, ಅಂದೇ ಜಾಮೀನಿನ ಮೇಲೆ ಬಿಡುಗಡೆ ಮಾಡಲಾಗಿದೆ ಎಂಬ ವರದಿಯನ್ನು ಸಲ್ಲಿಸಿರುತ್ತಾರೆ. ಆದ್ದರಿಂದ, ಸದರಿ ವರದಿಯನ್ವಯ, ಸದರಿಯವರನ್ನು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಮುಂದುವರೆಸುವುದು ಸಮಂಜಸವಾಗಿರುವುದಿಲ್ಲ. ಆದ್ದರಿಂದ, ಸದರಿ ಅಧಿಕಾರಿಯವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರಿಸಿ, ಅವರನ್ನು ಅಮಾನತ್ತಿನಲ್ಲಿಡುವುದು ಅಪೇಕ್ಷಣೀಯವೆಂದು ಕಂಡುಬಂದಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಪಿಎನ್: ಸಿಶಾ-1:155:2004-2005, ಬೆಂಗಳೂರು, ದಿನಾಂಕ: 18ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ಶ್ರೀ ಆರ್. ಎನ್. ಪಠಾಣ್, ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. 1ನೇ ನ್ಯಾಯಾಲಯ, ಗದಗ್, ಇವರನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ 10ನೇ ನಿಯಮದ (1) (ಎ) ಉಪ ನಿಯಮದಡಿ ಪ್ರದತ್ತವಾದ ಅಧಿಕಾರದನ್ವಯ, ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರಿಸಿ, ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಇವರು ನಿಯಮಾನುಸಾರ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಆರ್. ಎನ್. ಪಠಾಣ್, ಇವರು ಸಕ್ಷಮ ಪ್ರಾಧಿಕಾರದ ಅನುಮತಿ ಇಲ್ಲದೆ ತಮ್ಮ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

**ಆರ್. ಜೆ. ದೇಸಾಯಿ**

ಪಿ.ಆರ್.66 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು.

## ನೋಂದಣಿ ಮತ್ತು ಮುದ್ರಾಂಕಗಳ ಇಲಾಖೆ

## ನೇಮಕಾತಿ ಆದೇಶ

## ಜಿಲ್ಲಾ ನೋಂದಣಾಧಿಕಾರಿಗಳು ಚಾಮರಾಜನಗರ ಇವರ ನಡವಳಿಗಳು

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಚಾಮರಾಜನಗರ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ದ್ವಿತೀಯ ದರ್ಜೆ ಸಹಾಯಕರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ :**

1. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರಿಗೆ ಈ ಕಛೇರಿಯಿಂದ ಬರೆದಿರುವ ಪತ್ರ ಸಂಖ್ಯೆ: ಸಿಬ್ಬಂದಿ 78/2001-02 (1) ದಿನಾಂಕ: 26.12.2001
2. ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001
3. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: ಇಎಸ್‌ಟಿ-1-273/2001-02 ದಿನಾಂಕ: 1.8.2002 (ದಿನಾಂಕ: 8.8.2002ರ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)
4. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಂತಿಮ ಆಯ್ಕೆಪಟ್ಟಿ ಸಂಖ್ಯೆ: ಇ.ಎಸ್.ಟಿ-1-273/2001-2002 ದಿನಾಂಕ: 23.11.2004
5. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: ಇ.ಎಸ್.ಟಿ.-1-273/2001-2002 ದಿನಾಂಕ: 14.12.2004

**ಪ್ರಸ್ತಾವನೆ:**

ಈ ಇಲಾಖೆಯ ಚಾಮರಾಜನಗರ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಈ ಕಛೇರಿಯಿಂದ ಉಲ್ಲೇಖ (1) ರನ್ವಯ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1 | ಚಾಮರಾಜನಗರ | ಇಲ್ಲ | 1 | 1 |

ಈ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು ಅರ್ಹತೆ ಆಧಾರದ ಮೇಲೆ ಆಯ್ಕೆ ಮಾಡಿ ಅರ್ಹ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಉಲ್ಲೇಖ (4) ರನ್ವಯ ದಿನಾಂಕ: 23.11.2004 ರಂದು ಪ್ರಕಟಿಸಿ, ತದನಂತರ ಈ ಕಛೇರಿಯಿಂದ ಉಲ್ಲೇಖ (1)ರ ಪತ್ರದಲ್ಲಿ ಮೇಲ್ಕಂಡ ವರದಿ ಮಾಡಿದ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಕೆಳಕಂಡ ಅಭ್ಯರ್ಥಿಯನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಉಲ್ಲೇಖ (5)ರ ಅವರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್ ಮಾಡಿ ಸದರಿ ಅಭ್ಯರ್ಥಿಯನ್ನು ಈ

ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆಗೆ ಕೆಳಕಂಡ ಅಭ್ಯರ್ಥಿಯನ್ನು ಸದರಿ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಸಿಬ್ಬಂದಿ: 32:2004-05 ದಿನಾಂಕ: 30ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (5)ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡುಬಂದ ಕೆಳಕಂಡ ಅಭ್ಯರ್ಥಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ. 3000-75-3450-100-4450-125-5450ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ. ಹಾಗೂ ಸದರಿ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಪರಿಶಿಷ್ಟ ಜಾತಿ/ ಪ.ಪಂಗಡ | ಜನ್ಮ ದಿನಾಂಕ | 7.9.2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ-ತಿಂ-ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಮಹಾದೇವ ಸಿದ್ದಪ್ಪ ಪಾಟೀಲ ಬಿನ್ ಸಿದ್ದಪ್ಪ ಪಾಟೀಲ ಮು:ಪೋಸ್ಟ್: ವಣ್ಣೂರ ತಾ: ಬೈಲ ಹೊಂಗಲ ಜಿಲ್ಲೆ: ಬೆಳಗಾಂ | ಪರಿಶಿಷ್ಟ ಪಂಗಡ | 5.9.1971 | 31.00.02 | ಎಸ್.ಎಸ್. ಎಲ್.ಸಿ. 71.33 | ಉಪ ನೋಂದಣಿ ಕಛೇರಿ, ಕೊಳ್ಳೇಗಾಲ ಚಾಮರಾಜನಗರ ಜಿಲ್ಲೆ | ಪರಿಶಿಷ್ಟ ಪಂಗಡ ಗ್ರಾಮೀಣ ಅಭ್ಯರ್ಥಿ ಮುಖ್ಯಪಟ್ಟಿ |

ಎಸ್.ಎಸ್.ಎಲ್.ಸಿ. ಅಂಕಪಟ್ಟಿಯ ನೋಂದಣಿ ಸಂಖ್ಯೆ: 212098/ಏಪ್ರಿಲ್ 1989ದ ಪ್ರಕಾರ ಸದರಿ ಅಭ್ಯರ್ಥಿಯ ಜನ್ಮ ದಿನಾಂಕವು 5.9.1971 ಆಗಿರುತ್ತದೆ.

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ. ಮತ್ತು ಅಭ್ಯರ್ಥಿಯು ಈ ಷರತ್ತುಗಳಿಗೆ ಬದ್ದರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ಸೂಚನೆ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದುಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿ ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ನಿಯಮಾವಳಿ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ದರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾವಿಧಿ) ಬರೆದುಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್ ರಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.

11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966ರಲ್ಲಿನ ನಿಯಮ 28ರ ರೀತ್ಯಾ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರ್‌ಪಡಿಸತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
15. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ಧನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20. ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
16. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
17. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ಹಾಗೂ ಮಾಜಿ ಸೈನಿಕರ ಮೀಸಲಾತಿಯಲ್ಲಿ ಆಯ್ಕೆಗೊಂಡವರು ಮಾಜಿ ಸೈನಿಕರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
18. ಇದೇ ರೀತಿ ಯೋಜನಾ ನಿರಾಶ್ರಿತರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಯೋಜನಾ ನಿರಾಶ್ರಿತ ಅಭ್ಯರ್ಥಿಗಳಲ್ಲವೆಂದು ಮತ್ತು ಅಂಗವಿಕಲರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಅಂಗವಿಕಲ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
19. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
20. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲಿ ಪುರಸ್ಕರಿಸಲಾಗುವುದಿಲ್ಲ.
21. ಅಭ್ಯರ್ಥಿಯು ಕೆಜಿಐಡಿಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು
22. ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ ಸಾಬೀತು ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧು ಎಂದು ದಾಖಲೆಗಳ ಸಹಿತ ಸಾಬೀತುಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೆ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20. ರೂಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ 2 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
23. 2 ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯ ಶಿಸ್ತು ಕ್ರಮ ಜರುಗಿಸಲಾಗುವುದು.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು,
ಚಾಮರಾಜನಗರ ಜಿಲ್ಲೆ, ಚಾಮರಾಜನಗರ.

ಪಿ.ಆರ್.67

## ನೋಂದಣಿ ಮತ್ತು ಮುದ್ರಾಂಕಗಳ ಇಲಾಖೆ

## ನೇಮಕಾತಿ ಆದೇಶ

### ಜಿಲ್ಲಾ ನೋಂದಣಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನಡವಳಿಗಳು

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಚಿಕ್ಕಮಗಳೂರು ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ದ್ವಿತೀಯ ದರ್ಜೆ ಸಹಾಯಕರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ :**

1. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರಿಗೆ ಈ ಕಛೇರಿಯಿಂದ ಬರೆದಿರುವ ಪತ್ರ ಸಂಖ್ಯೆ: ಆರ್‌ಜಿಎನ್:71(1):2001-02 ದಿನಾಂಕ: 20.12.2001
2. ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001
3. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: ಇಎಸ್‌ಟಿ-1-273/2001-02 ದಿನಾಂಕ: 1.8.2002 (ದಿನಾಂಕ: 8.8.2002ರ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)
4. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಂತಿಮ ಆಯ್ಕೆಪಟ್ಟಿ ಸಂಖ್ಯೆ: ಇ.ಎಸ್.ಟಿ-1-273/2001-2002 ದಿನಾಂಕ: 23.11.2004

5. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್ಮೆಂಟ್ ಆದೇಶ ಸಂಖ್ಯೆ: ಇ.ಎಸ್.ಟಿ.1-273/2001-2002 ದಿನಾಂಕ: 14.12.2004

**ಪ್ರಸ್ತಾವನೆ:**

ಈ ಇಲಾಖೆಯು ಚಿಕ್ಕಮಗಳೂರು ಜಿಲ್ಲೆಯ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಈ ಕಛೇರಿಯಿಂದ ಉಲ್ಲೇಖ (1) ರನ್ವಯ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1 | ಚಿಕ್ಕಮಗಳೂರು ಜಿಲ್ಲೆ | ಒಂದು | ಒಂದು | ಎರಡು |

ಈ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು ಮೆರಿಟ್ ಆಧಾರದ ಮೇಲೆ ಆಯ್ಕೆ ಮಾಡಿ, ಅರ್ಹ ಅಭ್ಯರ್ಥಿಗಳ ಅಂತಿಮ ಪಟ್ಟಿಯನ್ನು ನಿಯಮಾನುಸಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಉಲ್ಲೇಖ (4) ರನ್ವಯ ದಿನಾಂಕ: 23.11.2004 ರಂದು ಪ್ರಕಟಿಸಿ, ತದನಂತರ ಈ ಕಛೇರಿಯಿಂದ ಉಲ್ಲೇಖ (1)ರ ಪತ್ರದಲ್ಲಿ ಮೇಲ್ಕಂಡಂತೆ ವರದಿ ಮಾಡಿದ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಕೆಳಕಂಡ ಅಭ್ಯರ್ಥಿಗಳನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಉಲ್ಲೇಖ (5)ರ ಅವರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್‌ಮಾಡಿ ಸದರಿ ಅಭ್ಯರ್ಥಿಗಳನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆಗೆ ಕೆಳಕಂಡ ಅಭ್ಯರ್ಥಿಗಳನ್ನು ಸದರಿ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಸಿಬ್ಬಂದಿ: 50:2004-05 ದಿನಾಂಕ: 29ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (5)ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡುಬಂದ ಕೆಳಕಂಡ ಅಭ್ಯರ್ಥಿಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ, ರೂ. 3000-75-3450-100-4450-125-5450ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ. ಹಾಗೂ ಸದರಿ ಅಭ್ಯರ್ಥಿಗಳು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಎಸ್‌ಸಿ: ಎಸ್‌ಟಿ | ಜನ್ಮ ದಿನಾಂಕ | 7.9.2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ-ತಿಂ-ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಶಾಂತಕುಮಾರ್ ಹೆಚ್. ಬಿನ್ ಹೆಚ್.ಸಿ.ಹನುಮಂತಪ್ಪ ಈಶ್ವರ ನಿಲಯ, ಮಂಜುನಾಥ ಸಾಮಿಲ್ ಪಕ್ಕದರಸ್ತೆ, ರಾಜೀವ್‌ಗಾಂಧಿ ಬಡಾವಣೆ-2 ಕಡೂರು ಅಂಚೆ, ಚಿಕ್ಕಮಗಳೂರು ಜಿಲ್ಲೆ 577548 | ಎಸ್‌ಸಿ | 12.07.1973 | 29.01.25 | ಎಸ್.ಎಸ್. ಎಲ್.ಸಿ. 78.333 | ಜಿಲ್ಲಾ ನೋಂದಣಿ ಕಛೇರಿ ಚಿಕ್ಕಮಗಳೂರು | ಪರಿಶಿಷ್ಟ ಜಾತಿ ಸಾಮಾನ್ಯ ಅಭ್ಯರ್ಥಿ ಮುಖ್ಯಪಟ್ಟಿ. |
| 2. | ಎಸ್. ರಾಮಕೃಷ್ಣಪ್ಪ, ಬಿನ್ ಚನ್ನರಾಯಪ್ಪ, ಬೆಳ್ಳೂರು ಗ್ರಾಮ, ನರಸಾಪುರ ಅಂಚೆ ಕೋಲಾರ ತಾ: ಕೋಲಾರ ಜಿಲ್ಲೆ, 563133. | ಎಸ್‌ಟಿ | 07.05.1969 | 33.04.00 | ಎಸ್.ಎಸ್. ಎಲ್.ಸಿ. 74.833 | ಉಪ ನೋಂದಣಿ ಕಛೇರಿ ಮೂಡಿಗೆರೆ | ಪರಿಶಿಷ್ಟ ಜಾತಿ ಸಾಮಾನ್ಯ ಅಭ್ಯರ್ಥಿ ಮುಖ್ಯಪಟ್ಟಿ. |

ಎಸ್.ಎಸ್.ಎಲ್.ಸಿ. ಅಂಕಪಟ್ಟಿಯ ನೋಂದಣಿ ಸಂಖ್ಯೆ: 256106/ಏಪ್ರಿಲ್ 1990 (ವರ್ಷ)ದ ಪ್ರಕಾರ ಶಾಂತಕುಮಾರ್ ಹೆಚ್. ಇವರ ಜನ್ಮ ದಿನಾಂಕವು 12.07.1973 ಆಗಿರುತ್ತದೆ. ಮತ್ತು ಎಸ್.ಎಸ್.ಎಲ್.ಸಿ. ಅಂಕಪಟ್ಟಿ ನೋಂದಣಿ ಸಂಖ್ಯೆ: ಆರ್ 488655: ಏಪ್ರಿಲ್ 1987ರ ಪ್ರಕಾರ ಎಸ್. ರಾಮಕೃಷ್ಣಪ್ಪ ಇವರ ಜನ್ಮ ದಿನಾಂಕವು 07.05.1969 ಆಗಿರುತ್ತದೆ.

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ. ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ದರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದುಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ನಿಯಮಾವಳಿ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ದರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾವಿಧಿ) ಬರೆದುಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್ ರಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966ರಲ್ಲಿನ ನಿಯಮ 28ರ ರೀತ್ಯಾ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರ್‌ಪಡಿಸತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಎಲ್ಲಾ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232:99 (ಶ್ರೀ ಬಿ. ಎಲ್. ನಾರಾಯಣ: ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ದರಾಗಿರತಕ್ಕದ್ದು. ಹಾಗೂ ದ್ವಿತೀಯ ದರ್ಜೆ ಸಹಾಯಕ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲ ಎಂದು ತಿಳಿಯತಕ್ಕದ್ದು. ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232:99 ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ದರಾಗಿರುತ್ತೇವೆ ಎಂಬ ಬಗ್ಗೆ 20 ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ 3ನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
15. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತದೆ.
16. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ದ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ದನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20. ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
17. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
18. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ಹಾಗೂ ಮಾಜಿ ಸೈನಿಕರ ಮೀಸಲಾತಿಯಲ್ಲಿ ಆಯ್ಕೆಗೊಂಡವರು ಮಾಜಿ ಸೈನಿಕರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.

19. ಇದೇ ರೀತಿ ಯೋಜನಾ ನಿರಾಶ್ರಿತರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಯೋಜನಾ ನಿರಾಶ್ರಿತ ಅಭ್ಯರ್ಥಿಗಳಲ್ಲವೆಂದು ಮತ್ತು ಅಂಗವಿಕಲರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಅಂಗವಿಕಲ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
20. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
21. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲಿ ಪುರಸ್ಕರಿಸಲಾಗುವುದಿಲ್ಲ.
22. ಅಭ್ಯರ್ಥಿಯು ಕೆಜಿಐಡಿಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು
23. ಈ ನೇಮಕಾತಿಗಾಗಿ ಅರ್ಜಿಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ನಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ ಎಸ್ಟಾಬ್ಲಿಷ್ ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧು ಎಂದು ದಾಖಲೆಗಳ ಸಹಿತ ಸಾಬೀತುಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೆ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20. ರೂಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ 2 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
24. ಎರಡು ವರ್ಷದ ಪರಿಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯ ಶಿಸ್ತು ಕ್ರಮ ಜರುಗಿಸಲಾಗುವುದು.

ಪಿ.ಆರ್.68 ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ.

## ನೋಂದಣಿ ಮತ್ತು ಮುದ್ರಾಂಕಗಳ ಇಲಾಖೆ

## ನೇಮಕಾತಿ ಆದೇಶ

## ಜಿಲ್ಲಾ ನೋಂದಣಾಧಿಕಾರಿಗಳು, ಮೈಸೂರು ಇವರ ನಡವಳಿಗಳು

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಮೈಸೂರು ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ದ್ವಿತೀಯ ದರ್ಜೆ ಸಹಾಯಕರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ :**
1. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ಈ ಕಛೇರಿಯಿಂದ ಬರೆದಿರುವ ಪತ್ರ ಸಂಖ್ಯೆ: 142: ಸಿಬ್ಬಂದಿ: ಬ್ಯಾಕ್‌ಲಾಗ್: 2001-02 ದಿನಾಂಕ: 08.01.2002.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
3. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: EST-1-273/ 2001-02 ದಿನಾಂಕ: 1.08.2002 (ದಿನಾಂಕ: 8.8.2002 ರ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ).
4. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಂತಿಮ ಆಯ್ಕೆ ಪಟ್ಟಿ ಸಂಖ್ಯೆ EST-1-273/ 2001-02 ದಿನಾಂಕ: 23.11.2004
5. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST-1-273/ 2001-02 ದಿನಾಂಕ: 14.12.2004.

**ಪ್ರಸ್ತಾವನೆ:**

ಈ ಇಲಾಖೆಯ ಮೈಸೂರು ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಈ ಕಛೇರಿಯಿಂದ ಉಲ್ಲೇಖ (1) ರನ್ವಯ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1 | ಮೈಸೂರು ಜಿಲ್ಲೆ | ಮೂರು | ಒಂದು | ನಾಲ್ಕು |

ಈ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (2) ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (3) ರ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು Merit ಆಧಾರದ ಮೇಲೆ ಆಯ್ಕೆ ಮಾಡಿ ಅರ್ಹ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಉಲ್ಲೇಖ (4) ರನ್ವಯ ದಿನಾಂಕ: 23.11.2004 ರಂದು ಪ್ರಕಟಿಸಿ, ತದನಂತರ ಈ ಕಛೇರಿಯಿಂದ ಉಲ್ಲೇಖ (1)ರ ಪತ್ರದಲ್ಲಿ ಮೇಲ್ಕಂಡಂತೆ ವರದಿ ಮಾಡಿದ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಕೆಳಕಂಡ ಅಭ್ಯರ್ಥಿಗಳನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಉಲ್ಲೇಖ (5)ರ ಅವರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್ ಮಾಡಿ ಸದರಿ ಅಭ್ಯರ್ಥಿಗಳನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡ ಅಭ್ಯರ್ಥಿಗಳನ್ನು ಸದರಿ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

## ಆದೇಶ

### ಸಂಖ್ಯೆ: ಸಿಬ್ಬಂದಿ: 56:04-05 ದಿನಾಂಕ: 1ನೇ ಜನವರಿ 2005

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ, ಉಲ್ಲೇಖ (5) ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡು ಬಂದ ಕೆಳಕಂಡ ಅಭ್ಯರ್ಥಿಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ. 3000-75-3450-100-4450-125-5450 ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ ಹಾಗೂ ಸದರಿ ಅಭ್ಯರ್ಥಿಗಳನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಎಸ್‌ಸಿ: ಎಸ್‌ಟಿ | ಜನ್ಮ ದಿನಾಂಕ | 7.9.2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ-ತಿಂ-ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಕೆ.ಎಸ್. ನಾಗರತ್ನ ಬಿನ್ ಶಾಂತಯ್ಯ ಮನೆ ನಂ. 79, 4ನೇ ವಿಭಾಗ, 3ನೇ ಅಡ್ಡ ರಸ್ತೆ, ಮಹಾಕವಿ ಕಾಳಿದಾಸ ರಸ್ತೆ, ಕುವೆಂಪುನಗರ, ಗುಂಡ್ಲುಪೇಟೆ-571111. | ಎಸ್‌ಸಿ | 28.8.1972 | 30.00.09 | ಎಸ್.ಎಸ್. ಎಲ್.ಸಿ. 75.333 | ಉಪನೋಂದಣಿ ಕಛೇರಿ ಪಿರಿಯಾಪಟ್ಟಣ, ಮೈಸೂರು ಜಿಲ್ಲೆ | ಪರಿಶಿಷ್ಟ ಜಾತಿ ಮಹಿಳಾ ಅಭ್ಯರ್ಥಿ ಮುಖ್ಯಪಟ್ಟಿ. |
| 2. | ಸಿ. ಚೆನ್ನಾ ನಾಯಕ ಬಿನ್ ಚಿಕ್ಕನಾಯಕ ಮಾಗುಡಿಲು, ನೇರಳೆ ಅಂಚೆ, ಹೆಚ್.ಡಿ. ಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ-571116 | ಎಸ್‌ಟಿ | 1.8.1973 | 29.01.06 | ಎಸ್.ಎಸ್. ಎಲ್.ಸಿ. 70.667 | ಉಪನೋಂದಣಿ ಕಛೇರಿ ಮಿರ್ಲೆ, ಮೈಸೂರು ಜಿಲ್ಲೆ | ಪರಿಶಿಷ್ಟ ಪಂಗಡ ಗ್ರಾಮೀಣ ಅಭ್ಯರ್ಥಿ ಮುಖ್ಯಪಟ್ಟಿ. |

ಎಸ್.ಎಸ್.ಎಲ್.ಸಿ. ಅಂಕಪಟ್ಟಿಯ ನೋಂದಣಿ ಸಂಖ್ಯೆ: 171349/ ಏಪ್ರಿಲ್ 1987 ರ ಪ್ರಕಾರ ಕೆ.ಎಸ್. ನಾಗರತ್ನ ಇವರ ಜನ್ಮ ದಿನಾಂಕವು 28.08.1972 ಆಗಿರುತ್ತದೆ ಮತ್ತು ಎಸ್.ಎಸ್.ಎಲ್‌ಸಿ. ಅಂಕಪಟ್ಟಿ ನೋಂದಣಿ ಸಂಖ್ಯೆ 329066/ ಏಪ್ರಿಲ್ 1990 ರ ಸಿ. ಚೆನ್ನಾನಾಯಕ ಇವರ ಜನ್ಮ ದಿನಾಂಕವು 01.08.1973 ಆಗಿರುತ್ತದೆ.

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ದರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಗಳನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದುಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಗಳನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿವಸಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ದರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರಗಳನ್ನು (ಪ್ರತಿಜ್ಞಾ ವಿಧಿ) ಬರೆದು ಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.

12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯಾ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರುಪಡಿಸತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಎಲ್ಲಾ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ 232/99 (ಶ್ರೀ ಬಿ. ಎಲ್. ನಾರಾಯಣ - Vs - ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ದರಾಗಿರತಕ್ಕದ್ದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232/99 ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ದಳಾಗಿರುತ್ತೇನೆ ಎಂಬ ಬಗ್ಗೆ 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-3ನ್ನು ಈ ಕಛೇರಿಗೆ ಬರೆದು ಕೊಡತಕ್ಕದ್ದು.
15. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
16. ಒಂದು ವೇಳೆ ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು ಇದಕ್ಕೆ ಬದ್ದನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
17. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೆ ರದ್ದು ಪಡಿಸಲಾಗುವುದು.
18. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ಹಾಗೂ ಮಾಜಿ ಸೈನಿಕರ ಮೀಸಲಾತಿಯಲ್ಲಿ ಆಯ್ಕೆಗೊಂಡವರು ಮಾಜಿ ಸೈನಿಕರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೆ ರದ್ದುಪಡಿಸಲಾಗುವುದು.
19. ಇದೇ ರೀತಿ ಯೋಜನಾ ನಿರಾಶ್ರಿತರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಯೋಜನಾ ನಿರಾಶ್ರಿತ ಅಭ್ಯರ್ಥಿಗಳಲ್ಲವೆಂದು ಮತ್ತು ಅಂಗವಿಕಲರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಅಂಗವಿಕಲ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೆ ರದ್ದುಪಡಿಸಲಾಗುವುದು.
20. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
21. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
22. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
23. ಈ ನೇಮಕಾತಿಗಾಗಿ ಅರ್ಜಿಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ನಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತುಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂ. ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-2 ನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
24. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

ಪಿ.ಆರ್.69 ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ**

**ಉಪ ವಿಭಾಗ-2 ಬಿಜಾಪುರ**

**ಪ್ರಕರಣ ಸಂಖ್ಯೆ: ಕಾಅಬ:ಕಾನಪ:ಮಪ್ರ:ಎಸ್‌ಆರ್:218/2004 ದಿನಾಂಕ: 29ನೇ ಡಿಸೆಂಬರ್ 2004**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು :**

1. ಶ್ರೀಮತಿ ಅಕ್ಕುತಾಯಿ ಗಂಡ ಚೆನ್ನಪ್ಪಾ ಹಿರಗೊಂಡ
2. ಸವಿತಾ ತಂದೆ ಚೆನ್ನಪ್ಪಾ ಹಿರಗೊಂಡ
3. ರಾಘವೇಂದ್ರ ತಂದೆ ಚೆನ್ನಪ್ಪಾ ಹಿರಗೊಂಡ
4. ಕವಿತಾ ತಂದೆ ಚೆನ್ನಪ್ಪಾ ಹಿರಗೊಂಡ
5. ಮಹಾದೇವ ತಂದೆ ಚೆನ್ನಪ್ಪಾ ಹಿರಗೊಂಡ
6. ರುಕಮಾಬಾಯಿ ಗಂಡ ಮಲಕಪ್ಪಾ ಹಿರಗೊಂಡ
   ಸಾ: ಕನ್ನಮಡಿ ತಾ: ಜಿ: ಬಿಜಾಪೂರ

1. ಮಿಸ್ಟರ್: ಅರ್ಜುನ್ ತಂದೆ ಸಿದ್ದಪ್ಪಾ ಹವಡಿ
   ಸಾ: ಬಬಲೇಶ್ವರ ತಾ: ಜಿ: ಬಿಜಾಪೂರ
2. ಚೆನ್ನಪ್ಪಾ ತಂದೆ ಗುರುಪಾದ ಹಿರಗೊಂಡ
   ಸಾ: ರಾವಲ್ ಗುಂಡವಾನ ತಾ: ಜತ್ತ ಜಿ: ಸಾಂಗಲಿ
3. ದಿ ಬ್ರ್ಯಾಂಚ್ ಮ್ಯಾನೇಜರ್
   ದಿ ನ್ಯೂ ಇಂಡಿಯಾ ಅಶೂರೆನ್ಸ್ ಕಂ. ಲಿ. ಹನಮಶೆಟ್ಟಿ
   ಬಿಲ್ಡಿಂಗ್ ಗುರುಕುಲ್ ರೋಡ್, ಬಿಜಾಪೂರ.

**ಪ್ರಕಟಣೆ**

ಶ್ರೀ: ಶ್ರೀಮತಿ: ಅಕ್ಕುತಾಯಿ ಗಂಡ ಚೆನ್ನಪ್ಪಾ ಹಿರಗೊಂಡ ಮತ್ತು ಇತರರು 5 ಜನರು ಇವರುಗಳಾದ ತಾವು ಮೃತ ಚೆನ್ನಪ್ಪ ತಂದೆ ಮಲಕಪ್ಪಾ ಹಿರಗೊಂಡ ಇವರ ಹೆಂಡತಿ, ಮಕ್ಕಳು ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ ಮೃತ ಚೆನ್ನಪ್ಪ ತಂದೆ ಮಲಕಪ್ಪಾ ಹಿರಗೊಂಡ ಇವರು ಒಂದನೇ ಪ್ರತಿವಾದಿಗಳಾದ ಮಿಸ್ಟರ್: ಅರ್ಜುನ ತಂದೆ ಸಿದ್ದಪ್ಪಾ ಹವಡಿ ಇವರ ಟ್ರಾಕ್ಟರ್ ನಂ. ಕೆಎ-28/3142 ರಲ್ಲಿ ಹಮಾಲ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್.70 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

**ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, ಉಡುಪಿ ಜಿಲ್ಲೆ, ಉಡುಪಿ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂಸಿಎ: ಸಿಆರ್-34/ಉಘಾಸಿ:04/499 ದಿನಾಂಕ: 23ನೇ ಡಿಸೆಂಬರ್ 2004**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು :**

1. ಶ್ರೀ ಮಂಜುಗೌಡ
2. ಶ್ರೀಮತಿ ಮಂಜಿ,
3. ಶ್ರೀಮತಿ ಇಂದಿರಾ

ವಾಸ: ಹುಂತಾಹೊನೆ ಕಲ್‌ತೋಡು ಗ್ರಾಮ, ಕುಂದಾಪುರ

ಪ್ರತಿವಾದಿಗಳು:

1. ಶ್ರೀ ಸುರೇಶ್ ಶೆಟ್ಟಿ, ಮಾಲೀಕರು,
ಮೇ ಸುಧಾ ರಿಫ್ರೆಶ್‌ಮೆಂಟ್ಸ್ ನಂ. 37/7, 4ನೇ ಕ್ರಾಸ್,
ಲಾಲ್‌ಭಾಗ್ ರೋಡ್ ಬೆಂಗಳೂರು-27

**ಅಧಿಸೂಚನೆ**

ಅರ್ಜಿದಾರರಾದ: ಶ್ರೀ ಮಂಜುಗೌಡ ಇವರು ತಮ್ಮ ಮಗನಾದ ಶ್ರೀ ಉದಯಗೌಡ ಇವರು ಪ್ರತಿವಾದಿಗಳಾದ ಶ್ರೀ ಸುರೇಶ್‌ಶೆಟ್ಟಿ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ: 14.8.1999 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿ ನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಹೆಚ್. ಕೆ. ಷನ್ಮುಗಪ್ಪ**

ಪಿ.ಆರ್.71 ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ,
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಡುಪಿ ಜಿಲ್ಲೆ, ಉಡುಪಿ.

**ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, ಉಡುಪಿ ಜಿಲ್ಲೆ, ಉಡುಪಿ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂಸಿಎ: ಸಿಆರ್-33/ಎಫ್‌ಇ:/2004/500 ದಿನಾಂಕ: 23ನೇ ಡಿಸೆಂಬರ್ 2004**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು :**

1. ಶ್ರೀಮತಿ ಸುಬ್ಬುಗೌಡ್ತಿ 2. ಸುಜಾತ 3. ಸುಧಾಕರ
4. ಸುಂದರ 5. ಉದಯ 6. ಸುಮಿತ್ರ
ವಾಸ: ಡಿವಲ್ಲೆ ಮನೆ, ಗೋಲಿ ಹೊಲೆಗ್ರಾಮ,
ಕುಂದಾಪುರ

ಪ್ರತಿವಾದಿಗಳು:

1. ಶ್ರೀ ಸುರೇಶ್ ಶೆಟ್ಟಿ, ಮಾಲೀಕರು,
ಮೇ ಸುಧಾ ರಿಫ್ರೆಶ್‌ಮೆಂಟ್ಸ್ ನಂ. 37/7, 4ನೇ ಕ್ರಾಸ್,
ಲಾಲ್‌ಭಾಗ್ ರಸ್ತೆ, ಬೆಂಗಳೂರು-27

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಸುಬ್ಬುಗೌಡ್ತಿ ಇವರು ತಮ್ಮ ಮಗನಾದ ಶ್ರೀ ಸುರೇಶ್‌ಗೌಡ ಇವರು ಪ್ರತಿವಾದಿಗಳಾದ ಶ್ರೀ ಸುರೇಶ್ ಶೆಟ್ಟಿ ಇವರಲ್ಲಿ ಕೆಸಲಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ: 13.8.1999 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿ ನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಹೆಚ್. ಕೆ. ಷನ್ಮುಗಪ್ಪ**

ಪಿ.ಆರ್.72 ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ,
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಡುಪಿ ಜಿಲ್ಲೆ, ಉಡುಪಿ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ**

**ಉಪವಿಭಾಗ-2 ಬಿಜಾಪುರ**

**ಪ್ರಕರಣ ಸಂಖ್ಯೆ: ಕಾಅಬ:ಕಾನಪ:222/04 ದಿನಾಂಕ: 30ನೇ ಡಿಸೆಂಬರ್ 2004**

**ಅರ್ಜಿದಾರರು :**

1. ಶೋಭಾ ಸುಭಾಷ ಚೌದರಿ ವ, 45, ಉ: ಮನೆಗೆಲಸ ಇರುವದು ವಿಜಾಪುರ
2. ಜ್ಯೋತಿ ಸುಭಾಷ್ ಚೌದರಿ
3. ಜ್ಞಾನೇಶ್ವರಿ ಸುಭಾಷ ಚೌಧರಿ ವ: ಇಬ್ಬರೂ ಅಪ್ರಾಪ್ತ

**ವಿರುದ್ಧ**

**ಪ್ರತಿವಾದಿಗಳು :**

1. ಸುಭಾಷ್ ಮಾರುತಿ @ ಸಂಭಾಜಿ ಚೌಧರಿ ವ, ಪ್ರಾಪ್ತ ಉದ್ಯೋಗ: ಲಾರಿ ಮಾಲಿಕರು, ನಳದುರ್ಗ
2. ಯೂನೈಟೆಡ್ ಇಂಡಿಯಾ ಇನ್‌ಶೂರೆನ್ಸ್ ಕಂ, ಲಿ. ವಿಜಾಪುರ.

**ಪ್ರಕಟಣೆ**

ಶ್ರೀ:ಶ್ರೀಮತಿ: ಶೋಭಾ ಗಂಡ ಸುಭಾಷ ಚೌದರಿ ಮತ್ತು ಇಬ್ಬರು ಅಪ್ರಾಪ್ತ ಮಕ್ಕಳು ಟ್ರಕ್ ಇವರುಗಳಾದ ತಾವು ಮೃತ ಸಂಭಾಜಿ ಇವರ ತಾಯಿ ಮತ್ತು ತಂಗಿಯರು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸಂಭಾಜಿ ಇವರು ಒಂದನೇ ಪ್ರತಿವಾದಿಗಳಾದ ಸುಭಾಷ ಮಾರುತಿ ಅಲಿಯಾಸ್ ಸಂಭಾಜಿ ಚೌದರಿ ಇವರ ಟ್ರಕ್ MH-13/G/2498ರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ**

ಪಿ.ಆರ್.73 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2 ಬಿಜಾಪೂರ ಜಿಲ್ಲೆ, ಬಿಜಾಪೂರ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ),**

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ. 1, ಅಲಿ ಆಸ್ಕರ್ ರಸ್ತೆ, ಬೆಂಗಳೂರು ಇವರ ನ್ಯಾಯಾಲಯದಲ್ಲಿ.**

**ದಾವಾ ಅರ್ಜಿ ಸಂಖ್ಯೆ: ಅನಿ(ಕೈ ಮತ್ತು ಇ)ಡಿಐಎಸ್:ಡಿ7:4246: 2004-2005**

**ಉಪಸ್ಥಿತರು :** ಶ್ರೀ ಬಿ. ನಾಗರಾಜ, ಬಿಎಸ್‌ಸಿ., ಎಲ್‌ಎಲ್‌ಬಿ.,
ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ)

**ವಾದಿ :**

ಕಾರ್ಯದರ್ಶಿ,
ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್
ನಿಯಮಿತ, ನಂ. 11, ಬುಲ್ ಟೆಂಪಲ್ ರಸ್ತೆ,
ಬಸವನಗುಡಿ, ಬೆಂಗಳೂರು-560004

**ವಿರುದ್ಧ**

**ಪ್ರತಿವಾದಿಗಳು :**

1. ಶ್ರೀ ಚಂದ್ರಹಾಸ ಮೋಹನ ಶೇಟ್
ವಯಸ್ಸು- ವಯಸ್ಕ, ಉದ್ಯೋಗ-ವ್ಯಾಪಾರ,
ನಂ.44, ವೈಕುಂಠ ಲೇಔಟ್, ಸಿಲ್ವರ್ ಟೌನ್,
ಗೋಕುಲ ರಸ್ತೆ, ಹುಬ್ಬಳ್ಳಿ.
2. ಶ್ರೀ ವಾಸುದೇವ ಚಂಡುರಾಯ ಪಿಂಚಕಾನ,
ವಯಸ್ಸು-51, ಉದ್ಯೋಗ-ಸರಾಫ್‌ರುವ ಚಿನ್ನಾಭರಣಗಳ
ಪರೀಕ್ಷಕರು, ಮೌಲ್ಯಮಾಪಕರು, ಮನೆ ನಂ. 44, ಸಿಲ್ವರ್ ಟೌನ್,
ಗೋಕುಲ ರಸ್ತೆ, ಹುಬ್ಬಳ್ಳಿ-30

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು:**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ಒಟ್ಟು ರೂ. 2,28,237-00 ಗಳನ್ನು ದಿನಾಂಕ: 1.7.2004 ರಿಂದ ಶೇಕಡ 16+2 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ಸಂಖ್ಯೆ: ಅನಿ (ಕೈ ಮತ್ತು ಇ) ಡಿಐಎಸ್/ಡಿ7/4246/2004-05 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

2) ಒಂದನೇ ಪ್ರತಿವಾದಿಯು ಬ್ಯಾಂಕಿನ ಸದಸ್ಯನಾಗಿರುತ್ತಾರೆ. ಎರಡನೇ ಪ್ರತಿವಾದಿಯು ವಾದಿ ಬ್ಯಾಂಕಿನ ಹುಬ್ಬಳ್ಳಿ ಶಾಖೆಯ ಬಂಗಾರ ಆಭರಣಗಳ ಪರಿವೀಕ್ಷಕರಾಗಿದ್ದು, ಒಂದನೇ ಪ್ರತಿವಾದಿಯು ಆಭರಣಗಳ ಈಡಿನ ಮೇಲೆ ಸಾಲವನ್ನು ಮಂಜೂರು ಮಾಡಲು ಕೋರಿದ್ದು, ಸದರಿ ಆಭರಣಗಳನ್ನು ಎರಡನೇ ಪ್ರತಿವಾದಿಯು ಪರಿವೀಕ್ಷಿಸಿ ಬಂಗಾರದ ಆಭರಣಗಳು ನೈಜವೆಂದು ದೃಢೀಕರಿಸಿದ ನಂತರ ಸಾಲವನ್ನು ಬಿಡುಗಡೆ ಮಾಡಲಾಗಿರುತ್ತದೆ. ಆದರೆ ಸದರಿ ಬಂಗಾರದ ಆಭರಣಗಳು ನಕಲಿ ಆಭರಣಗಳಾಗಿರುತ್ತವೆ. ಮೇಲಾಗಿ ಒಂದನೇ ಪ್ರತಿವಾದಿಯವರು ಎರಡನೇ ಪ್ರತಿವಾದಿಯವರ ಸಂಬಂಧಿಯಾಗಿರುತ್ತಾರೆ.

3) ವಾದಿಯು ಈ ದಾವಾ ಅರ್ಜಿಯ ಜೊತೆ 1959 ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ 1ನೇ ಪ್ರತಿವಾದಿಯವರ ತಂದೆ ಶ್ರೀ ಶೇಠ ಮೋಹನ ಚಂದೂರಾಯ, ಇವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯಲ್ಲಿ 1ನೇ ಪ್ರತಿವಾದಿಯವರು 1/3 ಭಾಗ ಹಿಸ್ಸೆ ಹೊಂದಿರುವುದಾಗಿ ತಿಳಿಸಿ ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 1ನೇ ಪ್ರತಿವಾದಿ ಅವರ ತಂದೆ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಏಕಮಾತ್ರ ಸ್ವತ್ತನ್ನು ಸದರಿಯವರು ವಾದಿ ಬ್ಯಾಂಕಿಗೆ ವಂಚನೆ ಮಾಡುವ ದುರುದ್ದೇಶದಿಂದ ಮಾರಾಟ ಮಾಡಲು/ ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೆ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ದ ಹೂಡಿರುವ ದಾವಾ

ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ ಡಿಕ್ರಿ ನೀಡಿದರು ಸದರಿ ಅವಾರ್ಡ್/ ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

4) ವಾದಿಯು ಸಲ್ಲಿಸಿರುವ ದಾವಾ ಅರ್ಜಿ ಮತ್ತು ಕಲಂ 103ರ ಅರ್ಜಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103 ರಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಅಲ್ಲದೆ 1ನೇ ಪ್ರತಿವಾದಿಯು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ: ಪರಭಾರೆ ಮಾಡದಂತೆ/ ತಡೆಯದೆ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

5) ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಆದ ನಾನು 1ನೇ ಪ್ರತಿವಾದಿಯವರ ತಂದೆ ಆದ ಶ್ರೀ ಶೇಠ ಮೋಹನ ಚಂದೂರಾಯ, ಇವರ ಹೆಸರಿನಲ್ಲಿ ಇರುವ ಸ್ಥಿರಾಸ್ತಿಯಲ್ಲಿ 1ನೇ ಪ್ರತಿವಾದಿಯ 1/3 ಭಾಗ ಹಿಸ್ಸೆ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

1ನೇ ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಚಿಸಿದಲ್ಲಿ ರೂ.2,30,000-00 (ಎರಡು ಲಕ್ಷ ಮೂವತ್ತು ಸಾವಿರ ರೂಪಾಯಿಗಳು) ಗಳನ್ನು ವಾದಿ ಬ್ಯಾಂಕಿನ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ 17.1.2005 ಒಳಗಾಗಿ ಅಧಿಕೃತ ಚಲನ್/ ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್ ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಶೇಠ ಮೋಹನ ಚಂದೂರಾಯ ಇವರ ಹೆಸರಿನಲ್ಲಿ ಇರುವ ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲ್ಲೂಕು ಕಾಳಂಗಿ ಗ್ರಾಮದಲ್ಲಿ ಸರ್ವೆ ನಂ.43/2, ಇವುಗಳಲ್ಲಿ 1ನೇ ಪ್ರತಿವಾದಿಯಾದ ಶ್ರೀ ಚಂದ್ರಹಾಸ ಮೋಹನ ಶೇಠ ಇವರ 1/3 ಭಾಗ ಹಿಸ್ಸೆ.

ಶಿರಸಿ ತಾಲ್ಲೂಕು ಕಾಳಂಗಿ ಗ್ರಾಮ ಸರ್ವೆ ನಂಬರ್ 43/2, ಇದರ ವಿಸ್ತೀರ್ಣ 11 ಎಕರೆ 14 ಗುಂಟೆ ಇದರ ಚಕ್ಕುಬಂದಿ.

**(ಅವಿಭಾಜಿತ ಪಾಲು)**

ಪೂರ್ವಕ್ಕೆ : 53ನೇ ಸರ್ವೆ ನಂಬರ್ ಜಮೀನು

ಪಶ್ಚಿಮಕ್ಕೆ : 42ನೇ ಸರ್ವೆ ನಂಬರ್ ಜಮೀನು

ಉತ್ತರಕ್ಕೆ : 44 ಮತ್ತು 45ನೇ ಸರ್ವೆ ನಂ. ಭಾಗಗಳು.

ದಕ್ಷಿಣಕ್ಕೆ : 40ನೇ ಸರ್ವೆ ನಂ. ಭಾಗಗಳು ಜಮೀನು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 6.12.2004 ರಂದು ನೀಡಿರುತ್ತೇನೆ.

ಪಿ.ಆರ್.74 ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ).

**IN THE COURT OF THE REGISTRAR OF COOPERATIVE SOCIETIES IN KARNATAKA, BANGALORE**

**Dispute No. RCS/DIS/SOU/D-4/889/2003-04**

**Before :** Sri K. H. Gopala Krishne Gowda I.A.S. Registrar of Co-operative Societies In Karnataka, Bangalore.

**Petitioner :**
Chief Executive Officer Sindhanur Urban Souharda Co-operative Bank Ltd., Sindhanur.

**Vs**

**Respondent:**

1. M/s Siddhi Ganapathi Traders Proprietor Arun Kumar Galatagi Occupation: Business, Tara Complex, Behind Canara Bank, Sindhanur, Raichur District.
2. Sri J.S.V.S.R.K. V. Prasad S/o Gopal Rao Occupation: Business, Behind Dr. Patne Nursing Home, Sindhanur, Raichur District.
3. Sri Basavalingayya S/o Shivayya, Occ: Agriculture, Upparawadi, Sindhanur, Raichur District.
4. Sri Muralidhar Galatagi S/o Madhav Rao Galatagi, Tara Complex, Behind Canara Bank, Sindhanur, Raichur Dist.

**Attachment of Immovable Properties under section 44(1) of the Karnataka Souharda Sahakari Act 1997**

Whereas the Petitioner Bank has filed a dispute before me u/s 39 (1) of the Karnataka Souharda Sahakari Act 1997 for recovery of a sum of Rs. 7,70.617.50 along with future interest from the Respondents. The Souharda Sahakari Act 1997 for attachment of properties belonging to the respondents.

After hearing the petitioner bank on their application U/s 44(1) of the Karnataka Souharda Sahakari Act 1997 a conditional attachment notice u/s 44(1) of the Karnataka Souharda Sahakari Act 1997 was issued to the respondents asking them, if they desire to raise the conditional attachment they should furnish security of cash of the value of Rs. 7.70 lakhs by depositing the said amount in the Petitioners Bank under suspense account and produce the original receipt/challan issued thereon to this office on or before 18.10.2003 and if they fail to do so the conditional attachment will be made absolute.

The case is taken up for hearing after completion of stipulated period duly serving the conditional attachment notice on the Respondents through R.P.A.D. The Respondents 2 & 3 appeared and filed their objections and written arguments through their counsel. It is contended that the petitioner in active collision with the 1st and 4th Respondents who are own brothers have created the bogus loan account in the name of the 1st respondent and adjusted the alleged loan amount to some other loan account which is outdated. As per the Petitioner the loan of Rs. 5.00 lakhs was sanctioned on 17.08.2001 but as per the account extract on 28.08.2001 loan of Rs. 8,14,000.00 was sanctioned. The alleged loan was sanctioned for business purpose. But there is no renewal of KST in respect of M/s Siddhiganapathi Traders. The respondent-4 was proprietor of M/s Chaitanya Enterprises and he has raised the loan from the petitioner bank to an extent of Rs. 2,150,000/- in the year 1995 and the said loan was not repaid by him. The respondent-3 Basavalingaiah, Devendrappa, mother of respondent 1 and 4 stood as sureties by offering an agricultural land measuring 11 acres and residential two flats. The respondents 2 and 3 are innocent persons, have been duped by saying that the Chaitanya Enterprises loan account is going to be closed for that their signatures are required. Believing the words the respondents 2&3 have signed some papers which the petitioner bank has malafidely used for offering sureties for the newly established loan account in the name of M/s Siddhiganapathi Traders. Respondents 2 and 3 are not sureties for the transaction. The property of the respondent 3 was wrongly shown as an extent of 8-22 acres but the respondent-3 and his brother are jointly entitled to only 4.11 $^{1}/_{2}$ acres. The 2nd Respondent's property was sold to the third party and the third party interest is created over the property. The Petitioner wants Ambamma's property to be attached but the said Ambamma is not a party to the proceedings. Since respondents are agriculturists their properties are not liable for attachment as per section 60(c) of CPC. In view of the above he requested to raise the attachment in respect of the property held by them.

The Learned Counsel for the petitioner has submitted that the respondents 2 & 3 have executed a mortgage deed. Even Ambamma sister of respondents 2 & 3 has executed the mortgage deed for raising loan to M/s Siddhiganapathi Traders. He has requested to confirm the attachment in favour of the petitioner.

The respondents have not furnished security as directed in the attachment notice to the satisfaction of this court. After hearing the Learned Counsel for respondents and the petitioner and careful examination of the documents, it is felt just and reasonable to make the conditional attachment notice date: 20.09.2003 absolute.

Hence I pass the following order

**ORDER**

The conditional attachment notice dated: 20.09.2003 is made absolute in respect of properties belonging to the respondents mentioned in the schedule below pending disposal of the dispute.

**SCHEDULE OF THE PROPERTY**

| Taluk | Grama | Survey No. | Dimension | Right |
|---|---|---|---|---|
| Sindhanur | Sindhanur | 194 | 8 Acres 22 guntas (Wet land) | Sri Basavalingayya S/o Shivayya |
| Sindhanur | Sindhanur | 962/1, Plot No. 3 &4 | Each 30'x40' | Smt. Ambamma W/o Devendrappa |
| Sindhanur | Sindhanur | Plot No. 5 | 30'x60' | Arun Kumar Galatagi |
| Sindhanur | Sindhanur | Municipal House No.6- 1-461 RCC House 2 Part 4 Room, 1 Hall Municipal House No.6-1 550 RCC House | | Sri Venkata Shivaram Krishna Prasad S/o Gopal, Sindhanur. |

Given under my hand and seal on this day of 30th December 2004.

Registrar of Co-operative societies,
In Karnataka, Bangalore.

PR-75

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ),**

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ. 1, ಅಲಿ ಆಸ್ಕರ್ ರಸ್ತೆ, ಬೆಂಗಳೂರು ಇವರ ನ್ಯಾಯಾಲಯದಲ್ಲಿ.**

**ದಾವಾ ಅರ್ಜಿ ಸಂಖ್ಯೆ: ಅನಿ(ಕೈ ಮತ್ತು ಇ)ಡಿಐಎಸ್:ಡಿ7:4245: 2004-2005**

**ಉಪಸ್ಥಿತರು :** ಶ್ರೀ ಬಿ. ನಾಗರಾಜ, ಬಿಎಸ್‌ಸಿ., ಎಲ್‌ಎಲ್‌ಬಿ.,
ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ)

**ವಾದಿ :**
ಕಾರ್ಯದರ್ಶಿ,
ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್
ನಿಯಮಿತ, ನಂ. 11, ಬುಲ್ ಟೆಂಪಲ್ ರಸ್ತೆ,
ಬಸವನಗುಡಿ, ಬೆಂಗಳೂರು-560004

**ವಿರುದ್ಧ**

**ಪ್ರತಿವಾದಿಗಳು :**
1. ಶ್ರೀ ಕುಮಾರ ಚಂಡುರಾಯ ಕುಡತರಕರ,
ವಯಸ್ಸು-ವಯಸ್ಕ, ಉದ್ಯೋಗ-ವ್ಯಾಪಾರ,
ನಂ.44, ವೈಕುಂಠ ಲೇಔಟ್, ಸಿಲ್ವರ್‌ಟೌನ್,
ಗೋಕುಲ ರಸ್ತೆ, ಹುಬ್ಬಳ್ಳಿ.
2. ಶ್ರೀ ವಾಸುದೇವ ಚಂಡುರಾಯ ಪಿಂಚಿಕಾನ,
ವಯಸ್ಸು-51, ಉದ್ಯೋಗ-ಸರಾಫ್‌ರು ವ ಚಿನ್ನಾಭರಣಗಳ
ಪರೀಕ್ಷಕರು, ಮೌಲ್ಯಮಾಪಕರು, ಮನೆ ನಂ. 44, ಸಿಲ್ವರ್ ಟೌನ್,
ಗೋಕುಲ ರಸ್ತೆ, ಹುಬ್ಬಳ್ಳಿ-30

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು:**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ಒಟ್ಟು ರೂ. 2,17,055-00 ಗಳನ್ನು ದಿನಾಂಕ: 1.7.2004 ರಿಂದ ಶೇಕಡ 16+2 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ಸಂಖ್ಯೆ: ಅನಿ (ಕೈ ಮತ್ತು ಇ) ಡಿಐಎಸ್/ಡಿ7/4245/2004-05 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

2) ಒಂದನೇ ಪ್ರತಿವಾದಿಯು ಬ್ಯಾಂಕಿನ ಸದಸ್ಯನಾಗಿರುತ್ತಾರೆ. ಎರಡನೇ ಪ್ರತಿವಾದಿಯು ವಾದಿ ಬ್ಯಾಂಕಿನ ಹುಬ್ಬಳ್ಳಿ ಶಾಖೆಯ ಬಂಗಾರ ಆಭರಣಗಳ ಪರಿವೀಕ್ಷಕರಾಗಿದ್ದು, ಒಂದನೇ ಪ್ರತಿವಾದಿಯು ಆಭರಣಗಳ ಈಡಿನ ಮೇಲೆ ಸಾಲವನ್ನು ಮಂಜೂರು ಮಾಡಲು ಕೋರಿದ್ದು, ಸದರಿ ಆಭರಣಗಳನ್ನು ಎರಡನೇ ಪ್ರತಿವಾದಿಯು ಪರಿವೀಕ್ಷಿಸಿ ಬಂಗಾರದ ಆಭರಣಗಳು ನೈಜವೆಂದು ದೃಢೀಕರಿಸಿದ ನಂತರ ಸಾಲವನ್ನು ಬಿಡುಗಡೆ ಮಾಡಲಾಗಿರುತ್ತದೆ. ಆದರೆ ಸದರಿ ಬಂಗಾರದ ಆಭರಣಗಳು ನಕಲಿ ಆಭರಣಗಳಾಗಿರುತ್ತವೆ. ಒಂದನೇ ಪ್ರತಿವಾದಿಯವರು ಎರಡನೇ ಪ್ರತಿವಾದಿಯವರ ಸಹೋದರನಾಗಿರುತ್ತಾನೆ.

3) ವಾದಿಯು ಈ ದಾವಾ ಅರ್ಜಿಯ ಜೊತೆ 1959 ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ 1ನೇ ಪ್ರತಿವಾದಿಯವರಾದ ಶ್ರೀ ಕುಮಾರ ಚಂದೂರಾಯ ಕುಡತರಕರ, ಇವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 1ನೇ ಪ್ರತಿವಾದಿ ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಏಕಮಾತ್ರ ಸ್ವತ್ತನ್ನು ಸದರಿಯವರು ವಾದಿ ಬ್ಯಾಂಕಿಗೆ ವಂಚನೆ ಮಾಡುವ ದುರುದ್ದೇಶದಿಂದ ಮಾರಾಟ ಮಾಡಲು/ ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೆ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ದ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ ಡಿಕ್ರಿ ನೀಡಿದರು ಸದರಿ ಅವಾರ್ಡ್/ ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

4) ವಾದಿಯು ಸಲ್ಲಿಸಿರುವ ದಾವಾ ಅರ್ಜಿ ಮತ್ತು ಕಲಂ 103ರ ಅರ್ಜಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103 ರಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಅಲ್ಲದೆ 1ನೇ ಪ್ರತಿವಾದಿಯು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ: ಪರಭಾರೆ ಮಾಡದಂತೆ/ ತಡೆಯದೆ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

5) ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಆದ ನಾನು 1ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

1ನೇ ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.2,20,000-00 (ಎರಡು ಲಕ್ಷ ಇಪ್ಪತ್ತು ಸಾವಿರ ರೂಪಾಯಿಗಳು) ಗಳನ್ನು ವಾದಿ ಬ್ಯಾಂಕಿನ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ 17.1.2005 ಒಳಗಾಗಿ ಅಧಿಕೃತ ಚಲನ್/ ರಶೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

1ನೇ ಪ್ರತಿವಾದಿಯಾದ ಶ್ರೀ ಕುಮಾರ್ ಚಂದೂರಾಯ ಕುಡತರಕರ ಹೆಸರಿನಲ್ಲಿ ಇರುವ ಈ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿ.

| ಕ್ರಮ ಗೂ | ಸರ್ವೆ ನಂ. ಆ | ಕ್ಷೇತ್ರ | ಆಸ್ತಿಯ ವರ್ಣನೆ. | ಸ್ಥಳ | ಕಂದಾಯ | ಮಾಲೀಕನ ಹೆಸರು ಸಂಖ್ಯೆ ಮತ್ತು ಹಿಸ್ಸೆ |
|---|---|---|---|---|---|---|
| 1. | Plot No.37 | 350.72 Sq.Metre. | ನಿವೇಶನ | ಅಮರಗೋಳ | - | ಕುಮಾರ ಚಂದೂರಾಯ ಕುಡತರಕರ ಪೂರಾ ಹಿಸ್ಸೆ. |

ಹುಬ್ಬಳ್ಳಿ ತಾಲ್ಲೂಕು ಅಮರಗೋಳ ಗ್ರಾಮ ಪ್ಲಾಟ್ ನಂಬರ್ 37 ಇದರ ವಿಸ್ತೀರ್ಣ 350.72 Sq.Metre. ಮೇಲ್ಕಂಡ ಷೆಡ್ಯೂಲಿಗೆ ಈ ಕೆಳಕಂಡ ಚಕ್ಕುಬಂದಿ.

ಪೂರ್ವಕ್ಕೆ : 24 ಮೀಟರ್ ರಸ್ತೆ
ಪಶ್ಚಿಮಕ್ಕೆ : 30 ಮೀಟರ್ ರಸ್ತೆ
ಉತ್ತರಕ್ಕೆ : 24 ಮೀಟರ್ ರಸ್ತೆ
ದಕ್ಷಿಣಕ್ಕೆ : ಕೇಂದ್ರ ವೇರ್‌ಹೌಸ್ ಕಾರ್ಪೊರೇಷನ್ (ಲಿ) ಇದರ ನಿಯೋಜಿತ ಸೈಟು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 6.12.2004 ರಂದು ನೀಡಿರುತ್ತೇನೆ.

ಪಿ.ಆರ್.76 ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ).

**ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಂತಾಮಣಿ**

**ದಿನಾಂಕ: 12ನೇ ಡಿಸೆಂಬರ್ 2004**

**ಕ್ರಿಮಿನಲ್ ಮೊಕದ್ದಮೆ ಸಿ.ಸಿ. 170:87 ರಲ್ಲಿ ಇತ್ಯರ್ಥವಾದ ಮುದ್ದೆಮಾಲನ್ನು ಸಂಬಂಧಪಟ್ಟ ವಾರಸುದಾರರಿಗೆ ಹಿಂದಿರುಗಿಸುವ ಬಗ್ಗೆ ಪ್ರೊಕ್ಲಮೇಷನ್.**

ಕ್ರಿಮಿನಲ್ ಮೊಕದ್ದಮೆ ಸಂಖ್ಯೆ 170:87 ನಮ್ಮ ನ್ಯಾಯಾಲಯದಲ್ಲಿ ದಿನಾಂಕ: 5.12.2002 ರಂದು ಇತ್ಯರ್ಥವಾಗಿದ್ದು ಸದರಿ ಕೇಸಿನಲ್ಲಿ ಮುದ್ದೆ ಮಾಲು ಸಂಖ್ಯೆ ಪಿ.ಆರ್. 64:88 ಒಂದು ಹಳೆಯ ಎಸ್.ಬಿ.ಎಂ.ಎಲ್. ಬಂದೂಕನ್ನು ಮೃತ ಫಿರ್ಯಾದಿ ಚಿಕ್ಕ ಚೌಡಪ್ಪ ಬಿನ್ ವೆಂಕಟಪ್ಪ ನೆರ್ನಹಳ್ಳಿ ಚಿಂತಾಮಣಿ ತಾಲ್ಲೂಕು, ಎಂಬುವವರ ವಾರಸುದಾರರಿಗೆ ಹಿಂದಿರುಗಿಸಲು ಆದೇಶವಾಗಿರುತ್ತದೆ.

ನ್ಯಾಯಾಲಯದಿಂದ ಸದರಿ ಕಡತದ ಮೃತ ಫಿರ್ಯಾದಿಯ ವಾರಸುದಾರರರಿಗೆ ವಾರಸು ಪ್ರಮಾಣ ಪತ್ರವನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ ಬಂದೂಕನ್ನು ವಾಪಸ್ ಪಡೆಯಲು ಹಲವಾರು ಬಾರಿ ತಿಳುವಳಿಕೆ ಪತ್ರಗಳನ್ನು ಸಂಬಂಧಪಟ್ಟ ಪೊಲೀಸ್ ನವರ ಮುಖಾಂತರ ಜಾರಿಗಾಗಿ ಕಳುಹಿಸಲಾಗಿರುತ್ತದೆ. (ಎಂ.ಟಿ.ನಂ: 636:03. 716:03 75:04 112:04. 223:04. 339:04 480:04)

ಆದರೆ ಪ್ರಸ್ತುತ ಅವಧಿಯವರೆವಿಗೆ ಮೃತ ಫಿರ್ಯಾದಿ ಚಿಕ್ಕಚೌಡಪ್ಪನವರ ವಾರಸುದಾರರ್‍ಯಾರೂ ದೃಢೀಕೃತ ವಾರಸು ಪ್ರಮಾಣ ಪತ್ರದೊಂದಿಗೆ ನ್ಯಾಯಾಲಯಕ್ಕೆ ಹಾಜರಾಗಿ ಬಂದೂಕನ್ನು ವಾಪಸ್ ಪಡೆದಿರುವುದಿಲ್ಲ.

ಆದ ಕಾರಣ ನ್ಯಾಯಾಲಯವು ಈ ಮೂಲಕ ಆದೇಶಿಸುವುದೇನೆಂದರೆ, ಮೇಲೆ ತಿಳಿಸಿದ ಮೃತ ಫಿರ್ಯಾದಿಯ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ದೃಢೀಕೃತ ವಾರಸು ಪ್ರಮಾಣ ಪತ್ರದೊಂದಿಗೆ ಈ ನೋಟೀಸು ತಲುಪಿದ 6 ತಿಂಗಳ ಒಳಗಾಗಿ ನ್ಯಾಯಾಲಯಕ್ಕೆ ಹಾಜರಾಗಿ ಈ ಕೇಸಿನಲ್ಲಿನ ಬಂದೂಕನ್ನು ವಾಪಸ್ ಪಡೆದುಕೊಳ್ಳತಕ್ಕದ್ದು ತಪ್ಪಿದ್ದಲ್ಲಿ ನ್ಯಾಯಾಲಯವು ಕಾನೂನಿನ ರೀತ್ಯ ಮುದ್ದೆ ಮಾಲನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದೆಂದು ಈ ಪ್ರೊಕ್ಲಮೇಷನ್ ಮುಖಾಂತರ ಪ್ರಕಟಣೆ ಹೊರಡಿಸಿ ಆದೇಶಿಸಲಾಗಿದೆ.

**ಹೆಚ್. ರಾಮು**

ಪಿ.ಆರ್.77 ಸಿವಿಲ್ ಜಡ್ಜ್ (ಹಿ.ಶ್ರೇ.) ಚಿಂತಾಮಣಿ.

**ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಂತಾಮಣಿ**

**ಕ್ರಿಮಿನಲ್ ಮೊಕದ್ದಮೆ ಸಿ.ಸಿ.ನಂ. 351:88 ರಲ್ಲಿ ಇತ್ಯರ್ಥವಾದ ಮುದ್ದೆ ಮಾಲನ್ನು ಸಂಬಂಧಪಟ್ಟ ವಾರಸುದಾರರಿಗೆ ಹಿಂದಿರುಗಿಸುವ ಬಗ್ಗೆ ಪ್ರೊಕ್ಲಮೇಷನ್.**

ಕ್ರಿಮಿನಲ್ ಮೊಕದ್ದಮೆ ಸಂಖ್ಯೆ ಸಿ.ಸಿ 351:88 ನಮ್ಮ ನ್ಯಾಯಾಲಯದಲ್ಲಿ ದಿನಾಂಕ: 5.12.2002 ರಂದು ಇತ್ಯರ್ಥವಾಗಿದ್ದು ಸದರಿ ಕೇಸಿನಲ್ಲಿ ಮುದ್ದೆ ಮಾಲು ಸಂಖ್ಯೆ ಪಿ.ಆರ್. 202:90 ಒಂದು ಹಳೆಯ ಕಬ್ಬಿಣದ ನೇಗಿಲನ್ನು ಸದರಿ ಕೇಸಿನ ಫಿರ್ಯಾದಿ ಶ್ರೀನಿವಾಸರೆಡ್ಡಿ ಬಿನ್ ಅಕ್ಕುಲಪ್ಪ, ಮಾಸ್ತೇನಹಳ್ಳಿ, ಚಿಂತಾಮಣಿ ತಾಲ್ಲೂಕು, ಇವರಿಗೆ ಹಿಂದಿರುಗಿಸಲು ಆದೇಶವಾಗಿರುತ್ತದೆ.

ನ್ಯಾಯಾಲಯದಿಂದ ಸದರಿ ಫಿರ್ಯಾದಿಗೆ ಹಲವಾರು ಬಾರಿ ತಿಳುವಳಿಕೆ ಪತ್ರಗಳನ್ನು ನೀಡಿ ಸಂಬಂಧಪಟ್ಟ ಪೊಲೀಸಿನವರ ಮುಖಾಂತರ ಜಾರಿಗಾಗಿ ಕಳುಹಿಸಲಾಗಿರುತ್ತದೆ. (ಎಂ.ಟಿ. ಸಂಖ್ಯೆ 336:03, 628:03, 724:03, 274:04) ಆದರೆ ಸದರಿ ತಿಳುವಳಿಕೆ ಪತ್ರಗಳು ಪೋಲಿಸಿನವರ ಷರಾದೊಂದಿಗೆ ನ್ಯಾಯಾಲಯಕ್ಕೆ ವಾಪಸ್ಸಾಗಿರುತ್ತದೆ. ಸದರಿ ಷರಾಗಳಲ್ಲಿ ಈ ಕಡತದ ಫಿರ್ಯಾದಿಯು ವಿಳಾಸದಲ್ಲಿ ವಾಸವಿಲ್ಲದೆ ಬೇರೆ ಊರುಗಳಿಗೆ ಹೋಗಿರುತ್ತಾರೆ ಗ್ರಾಮದಲ್ಲಿ ಇವರು ಬಹಳ ವರ್ಷಗಳಿಂದ ಇರುವುದಿಲ್ಲ ಎಂದು ಮಹಜರ್ ಕೂಡ ಮಾಡಿ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ.

ಆದಕಾರಣ ನ್ಯಾಯಾಲಯವು ಈ ಮೂಲಕ ಆದೇಶಿಸುವುದೇನೆಂದರೆ, ಮೇಲೆ ತಿಳಿಸಿದ ಫಿರ್ಯಾದಿ ಅಥವಾ ಅವರ ವಾರಸುದಾರರು ಯಾರಾದರೂ ಇದ್ದಲ್ಲಿ ಈ ನೋಟೀಸು ತಲುಪಿದ 6 ತಿಂಗಳ ಒಳಗಾಗಿ ನ್ಯಾಯಾಲಯಕ್ಕೆ ಹಾಜರಾಗಿ ಈ ಕೇಸಿನಲ್ಲಿ ಮಾಲು "ಒಂದು ಕಬ್ಬಿಣದ ನೇಗಿಲನ್ನು" ವಾಪಸ್ಸು ಪಡೆದುಕೊಳ್ಳತಕ್ಕದ್ದು ತಪ್ಪಿದಲ್ಲಿ ನ್ಯಾಯಾಲಯವು ಕಾನೂನಿನ ರೀತ್ಯಾ ಸದರಿ ಕಡತದ ಮಾಲನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದೆಂದು ಈ ಪ್ರೊಕ್ಲಮೇಷನ್ ಮುಖಾಂತರ ಪ್ರಕಟಣೆ ಹೊರಡಿಸಲು ಆದೇಶಿಸಲಾಗಿದೆ.

**ಹೆಚ್. ರಾಮು**

ಪಿ.ಆರ್.78 ಸಿ.ಜೆ.(ಹಿ.ವಿ) ಮತ್ತು ಜೆಎಂಎಫ್‌ಸಿ, ಚಿಂತಾಮಣಿ.

**ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಂತಾಮಣಿ**

**ಕ್ರಿಮಿನಲ್ ಮೊಕದ್ದಮೆ ಸಿ.ಸಿ. ನಂಬರು 66:02 ರಲ್ಲಿ ಇತ್ಯರ್ಥವಾದ ಮುದ್ದೆ ಮಾಲನ್ನು ಸಂಬಂಧಪಟ್ಟ ವಾರಸುದಾರರಿಗೆ ಹಿಂದಿರುಗಿಸುವ ಬಗ್ಗೆ ಪ್ರೊಕ್ಲಮೇಷನ್.**

ಕ್ರಿಮಿನಲ್ ಮೊಕದ್ದಮೆ ಸಂಖ್ಯೆ ಸಿ.ಸಿ. 66:02 ನಮ್ಮ ನ್ಯಾಯಾಲಯದಲ್ಲಿ ದಿನಾಂಕ: 7.11.2003 ರಂದು ಇತ್ಯರ್ಥವಾಗಿದ್ದು ಸದರಿ ಕೇಸಿನಲ್ಲಿ ಮುದ್ದೆ ಮಾಲು ಸಂಖ್ಯೆ ಪಿ.ಆರ್. 33:2002 ಒಂದು ಜಖಂಗೊಂಡಿರುವ ಟಿವಿಎಸ್ ಚಾಂಪ್ ನಂ. ಕೆಎ. 07:ಇ:6405ನ್ನು ಕಡತದಲ್ಲಿ ಸಂಬಂಧಪಟ್ಟವರಿಗೆ ಹಿಂದಿರುಗಿಸಲು ಆದೇಶವಾಗಿರುತ್ತದೆ.

ನ್ಯಾಯಾಲಯದಿಂದ ಸದರಿ ಕಡತದಲ್ಲಿ ಮೇಲ್ನೋಟಕ್ಕೆ ವಾರಸುದಾರರಾಗಿರುವ ಮೃತ ಶ್ರೀನಿವಾಸಗೌಡ, ಮದ್ದಲಹಳ್ಳಿ ಚಿಂತಾಮಣಿ ತಾಲ್ಲೂಕು ಇವರ ಪತ್ನಿ ಶ್ರೀಮತಿ ಲಕ್ಷ್ಮಿದೇವಮ್ಮನವರಿಗೆ ಸದರಿ ವಾಹನದ ದಾಖಲಾತಿಗಳನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ ವಾಹನವನ್ನು ನ್ಯಾಯಾಲಯದಿಂದ ವಾಪಸ್ಸು ಪಡೆಯುವಂತೆ ಹಲವಾರು ಬಾರಿ ತಿಳುವಳಿಕೆ ಪತ್ರಗಳನ್ನು ಸಂಬಂಧಪಟ್ಟ ಪೋಲಿಸಿನವರ ಮುಖಾಂತರ ಜಾರಿಗಾಗಿ ಕಳುಹಿಸಲಾಗಿರುತ್ತದೆ (ಎಂ.ಟಿ. ಸಂಖ್ಯೆ: 71:04, 111:04, 226:04, 484:04,) ಆದರೆ ಪ್ರಸ್ತುತ ಅವಧಿಯವರೆಗೆ ಮೃತ ಶ್ರೀನಿವಾಸಗೌಡರವರ ವಾರಸುದಾರರು ಯಾರೂ ದೃಢೀಕೃತ ವಾರಸು ಪ್ರಮಾಣಪತ್ರವನ್ನು ಮತ್ತು ವಾಹನದ ದಾಖಲಾತಿಗಳನ್ನು ನ್ಯಾಯಾಲಯಕ್ಕೆ ಹಾಜರಾಗಿ ದಾಖಲಾತಿಗಳನ್ನು ಸಲ್ಲಿಸಿ ವಾಹನವನ್ನು ವಾಪಸ್ಸು ಪಡೆಯುವಲ್ಲಿ ವಿಫಲರಾಗಿರುತ್ತಾರೆ.

ಆದಕಾರಣ ನ್ಯಾಯಾಲಯವು ಈ ಮೂಲಕ ಆದೇಶಿಸುವುದೇನೆಂದರೆ ಮೇಲೆ ತಿಳಿಸಿದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ದೃಢೀಕೃತ ವಾರಸು ಪ್ರಮಾಣಪತ್ರ ಮತ್ತು ವಾಹನಕ್ಕೆ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು ಈ ನೋಟೀಸ್ ತಲುಪಿದ 6 ತಿಂಗಳ ಒಳಗಾಗಿ ನ್ಯಾಯಾಲಯಕ್ಕೆ ಹಾಜರಾಗಿ ಈ ಕೇಸಿನಲ್ಲಿರುವ ವಾಹನವನ್ನು ವಾಪಸ್ಸು ಪಡೆದುಕೊಳ್ಳತಕ್ಕದ್ದು ತಪ್ಪಿದ್ದಲ್ಲಿ ನ್ಯಾಯಾಲಯವು ಕಾನೂನಿನ ರೀತ್ಯಾ ಸದರಿ ಕಡತದ ಮಾಲನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದೆಂದು ಈ ಪ್ರೊಕ್ಲಮೇಷನ್ ಮುಖಾಂತರ ಪ್ರಕಟಣೆ ಹೊರಡಿಸಲು ಆದೇಶಿಸಲಾಗಿದೆ.

**ಹೆಚ್. ರಾಮು**
ಸಿ.ಜೆ.(ಹಿ.ವಿ) ಮತ್ತು ಜೆಎಂಎಫ್‌ಸಿ, ಚಿಂತಾಮಣಿ.

ಪಿ.ಆರ್.79

**ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಂತಾಮಣಿ**
**ಕ್ರಿಮಿನಲ್ ಮೊಕದ್ದಮೆ ಸಿ.ಸಿ. ನಂಬರು 20:2003 ರಲ್ಲಿ ಇತ್ಯರ್ಥವಾದ ಮುದ್ದೆ ಮಾಲನ್ನು ಸಂಬಂಧಪಟ್ಟ ವಾರಸುದಾರರಿಗೆ ಹಿಂದಿರುಗಿಸುವ ಬಗ್ಗೆ ಪ್ರೊಕ್ಲಮೇಷನ್.**

ಕ್ರಿಮಿನಲ್ ಮೊಕದ್ದಮೆ ಸಂಖ್ಯೆ ಸಿ.ಸಿ. 20:2003 ನಮ್ಮ ನ್ಯಾಯಾಲಯದಲ್ಲಿ ದಿನಾಂಕ: 17.5.2004 ರಂದು ಇತ್ಯರ್ಥವಾಗಿದ್ದು ಸದರಿ ಕೇಸಿನಲ್ಲಿ ಮುದ್ದೆ ಮಾಲು ಸಂಖ್ಯೆ ಪಿ.ಆರ್. 9:2004 ಒಂದು ಹಿರೋಹೊಂಡ ಕೆಎ. 07:ಇ:6711 ಮೋಟಾರ್ ಸೈಕಲ್‌ನ್ನು ಸಂಬಂಧಪಟ್ಟವರಿಗೆ ಹಿಂದಿರುಗಿಸಲು ಆದೇಶವಾಗಿರುತ್ತದೆ.

ನ್ಯಾಯಾಲಯಕ್ಕೆ ಸದರಿ ಕಡತದಲ್ಲಿ ಮೇಲ್ನೋಟದ ವಾರಸುದಾರರಾದ ರಾಮಾಂಜನೇಯರೆಡ್ಡಿಯವರಿಗೆ ಹಲವಾರು ಬಾರಿ ತಿಳುವಳಿಕೆ ಪತ್ರಗಳನ್ನು ಸಂಬಂಧಪಟ್ಟ ಪೋಲಿಸ್‌ನವರ ಮುಖಾಂತರ ಜಾರಿಗಾಗಿ ಕಳುಹಿಸಲಾಗಿರುತ್ತದೆ (ಎಂ.ಟಿ. ಸಂಖ್ಯೆ: 406:04, ಎಂ.ಟಿ.482:04, ಎಂ.ಟಿ 502:04).

ಆದರೆ ಪ್ರಸ್ತುತ ಅವಧಿಯವರೆಗೆ ಈ ಕಡತಕ್ಕೆ ಸಂಬಂಧಪಟ್ಟ ಮೇಲೆ ವಿವರಿಸಿದ ದ್ವಿಚಕ್ರ ವಾಹನದ ಮಾಲೀಕರಾಗಲೀ ಅವರ ವಾರಸುದಾರರಾಗಲೀ ದೃಢೀಕೃತ ವಾರಸು ಪ್ರಮಾಣ ಪತ್ರದೊಂದಿಗೆ ಮತ್ತು ವಾಹನದ ದಾಖಲಾತಿಗಳೊಂದಿಗೆ ನ್ಯಾಯಾಲಯಕ್ಕೆ ಹಾಜರಾಗಿ ವಾಹನವನ್ನು ವಾಪಸ್ಸು ಪಡೆದಿರುವುದಿಲ್ಲ.

ಆದಕಾರಣ ನ್ಯಾಯಾಲಯವು ಈ ಮೂಲಕ ಆದೇಶಿಸುವುದೇನೆಂದರೆ ಮೇಲೆ ತಿಳಿಸಿದ ವಾಹನದ ಮಾಲೀಕರು ಅಥವಾ ಅವರ ವಾರಸುದಾರರು ಯಾರಾದರೂ ಇದ್ದಲ್ಲಿ ವಾಹನದ ಎಲ್ಲಾ ದಾಖಲಾತಿ ದೃಢೀಕೃತ ವಾರಸು ಪ್ರಮಾಣ ಪತ್ರದೊಂದಿಗೆ ನ್ಯಾಯಾಲಯಕ್ಕೆ ಹಾಜರಾಗಿ ಈ ನೋಟೀಸ್ ತಲುಪಿದ 6 ತಿಂಗಳ ಒಳಗಾಗಿ ನ್ಯಾಯಾಲಯಕ್ಕೆ ಹಾಜರಾಗಿ ಈ ಕೇಸಿನಲ್ಲಿರುವ ದ್ವಿಚಕ್ರವಾಹನವನ್ನು ವಾಪಸ್ಸು ಪಡೆದುಕೊಳ್ಳತಕ್ಕದ್ದು ತಪ್ಪಿದ್ದಲ್ಲಿ ನ್ಯಾಯಾಲಯವು ಕಾನೂನಿನ ರೀತ್ಯಾ ಸದರಿ ಕಡತದ ಮಾಲು ಪಿ.ಆರ್. 9:04 ಒಂದು ದ್ವಿಚಕ್ರ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದೆಂದು ಈ ಪ್ರೊಕ್ಲಮೇಷನ್ ಮುಖಾಂತರ ಪ್ರಕಟಣೆ ಹೊರಡಿಸಲು ಆದೇಶಿಸಲಾಗಿದೆ.

**ಹೆಚ್. ರಾಮು**
ಸಿ.ಜೆ.(ಹಿ.ವಿ) ಮತ್ತು ಜೆಎಂಎಫ್‌ಸಿ, ಚಿಂತಾಮಣಿ.

ಪಿ.ಆರ್.80

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**
**ಪ್ರಕರಣ ಸಂಖ್ಯೆ: ಕಾಪಕ:ಕಸ-73/04 ದಿನಾಂಕ: 28ನೇ ಡಿಸೆಂಬರ್ 2004**

**ಅರ್ಜಿದಾರರು :**

1. ಶ್ರೀಮತಿ ಜ್ಯೋತಿ, ಕೋಂ ಸೆಲ್ವ,
2. ಅರವಿಂದ್ ಬಿನ್ ಸೆಲ್ವ,
3. ಶ್ರೀ ವೆಂಕಟಪ್ಪ,
4. ಶ್ರೀಮತಿ ರುಕ್ಕಮ್ಮ ಕೋಂ ವೆಂಕಟಪ್ಪ
   ಇವರ ವಿಳಾಸ: ಇಂದಿರಾನಗರ, ಸೂಳೆಬೈಲು,
   ಶಿವಮೊಗ್ಗ ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು :**

1. ಕೆ. ರವಿ, ಬಿನ್ ಕಣ್ಣಪ್ಪ
   ಬೈಪಾಸ್ ರಸ್ತೆ, ಉರ್ಗಾದೂರ್, ಶಿವಮೊಗ್ಗ.
2. ದಿ ಬ್ರಾಂಚ್ ಮ್ಯಾನೇಜರ್, ಮೆ: ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ.,
   ಎಸ್. ಎಸ್. ಕಾಂಪ್ಲೆಕ್ಸ್, 1ನೇ ಮಹಡಿ, ಮೂಲರಂಗಪ್ಪ
   ಪೆಟ್ರೋಲ್ ಬಂಕ್ ಎದುರು ಬಿ. ಹೆಚ್. ರಸ್ತೆ, ಶಿವಮೊಗ್ಗ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದು ಏನೆಂದರೆ, ಸೆಲ್ವ ರವರು ಪ್ರತಿವಾದಿಯವರಲ್ಲಿ ಲೋಡರ್ ಆಗಿ ಕೆಲಸದ ಮೇಲೆ ಇದ್ದಾಗ 4.11.2004 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿನಾಂಕ: 2.12.2004 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾನೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದು ಏನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸಗಳ ಒಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ, ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.81

## ಕರ್ನಾಟಕ ಸರ್ಕಾರದ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಸಾರಿಇ 56 ಸಾಇಪ 2004 ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಒಸಾಇ 35 ಟಿಆರ್ಇ 2003, ದಿನಾಂಕ: 12.09.2003 ರಲ್ಲಿ ಗ್ರಾಮೀಣ ಜನರಿಗೆ ಹೆಚ್ಚಿನ ಸೌಲಭ್ಯ ಕಲ್ಪಿಸುವ ಸಲುವಾಗಿ ಒಟ್ಟು 9 ಸಹಾಯಕ ಪ್ರಾದೇಶಿಕ ಸಾರಿಗೆ ಕಚೇರಿಗಳನ್ನು ಮತ್ತು 4 ತನಿಖಾ ಠಾಣೆಗಳನ್ನು ತೆರೆಯಲಾಗಿದೆ.

ಈ ಹೊಸ ಕಛೇರಿಗಳ ಪೈಕಿ ಬೆಳಗಾವಿ ಜಿಲ್ಲೆಯ ಗೋಕಾಕ್‌ನಲ್ಲಿ ತೆರೆಯಲಾದ ಸಹಾಯಕ ಪ್ರಾದೇಶಿಕ ಸಾರಿಗೆ ಕಚೇರಿಯ ವ್ಯಾಪ್ತಿಗೆ ಗೋಕಾಕ್ ಮತ್ತು ಹುಕ್ಕೇರಿ ತಾಲ್ಲೂಕುಗಳನ್ನು ಸೇರಿಸಲಾಗಿದೆ. ಹುಕ್ಕೇರಿ ತಾಲ್ಲೂಕಿನ ಸಂಕೇಶ್ವರದ ಬಹಳಷ್ಟು ಹಳ್ಳಿಗಳು ಗಡಿ ಪ್ರದೇಶದ ಅಂಚಿನಲ್ಲಿರುವುದರಿಂದ ಗೋಕಾಕ ಪಟ್ಟಣವು ಅಲ್ಲಿಗೆ ದೂರವಾಗುವುದಲ್ಲದೆ ಲೈಸೆನ್ಸ್ ಹಾಗೂ ಇನ್ನಿತರ ದಾಖಲೆಗಳನ್ನು ಪಡೆಯಲು ಸಾರ್ವಜನಿಕರಿಗೆ ತುಂಬಾ ಅನಾನುಕೂಲವೂ ಹಾಗೂ ತೊಂದರೆದಾಯಕವೂ ಆಗಿರುವುದರಿಂದ ಸಂಕೇಶ್ವರ ಪ್ರದೇಶವನ್ನು ಚಿಕ್ಕೋಡಿ ಪ್ರಾದೇಶಿಕ ಸಾರಿಗೆ ಕಚೇರಿಯ ವ್ಯಾಪ್ತಿಗೆ ಪುನರ್ ಒಳಪಡಿಸುವಂತೆ ಸಂಕೇಶ್ವರದ ಶಾಸಕರು, ಅಲ್ಲಿಯ ಸಾರ್ವಜನಿಕರು, ದಿ ಆಟೋರಿಕ್ಷಾ ಯೂನಿಯನ್‌ನವರು, ಕಣಗಲಾ ಗ್ರಾಮ ಪಂಚಾಯತ್ ಅಧ್ಯಕ್ಷರು ಮತ್ತು ಕಣಗಲಾ ಲೇಟೆಕ್ಸ್ ಎಂಪ್ಲಾಯೀಸ್ ಫೆಡರೇಷನ್‌ರವರು ಕೋರಿರುವ ಹಿನ್ನೆಲೆಯಲ್ಲಿ ಸಾರ್ವಜನಿಕರ ಹಿತದೃಷ್ಟಿಯಿಂದ ಹುಕ್ಕೇರಿ ತಾಲ್ಲೂಕಿನ ಸಂಕೇಶ್ವರ ಮತ್ತು ಯಮಕನಮರಡಿ ಹೋಬಳಿಗಳ ವ್ಯಾಪ್ತಿಯನ್ನು (ಅನುಬಂಧ-ಅ ಮತ್ತು ಅನುಬಂಧ-ಆ ನಲ್ಲಿ ತೋರಿಸಿರುವಂತೆ) ಗೋಕಾಕ ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಯ ವ್ಯಾಪ್ತಿಯಿಂದ ಬೇರ್ಪಡಿಸಿ ಚಿಕ್ಕೋಡಿ ಪ್ರಾದೇಶಿಕ ಸಾರಿಗೆ ಕಛೇರಿಯ ವ್ಯಾಪ್ತಿಗೆ ಪುನರ್ ಒಳಪಡಿಸಿ ಮಾರ್ಪಾಡು ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ವಾಸುದೇವ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ.

**ಅಧಿಸೂಚನೆ ಸಂ: ಸಾರಿಇ 56 ಸಾಇಪ 2004, ದಿನಾಂಕ: 31.12.2004ಕ್ಕೆ ಅನುಬಂಧ-ಅ**

**ಸಂಕೇಶ್ವರ ಹೋಬಳಿ ವ್ಯಾಪ್ತಿಗೆ ಬರುವ 41 ಹಳ್ಳಿ/ ಪಟ್ಟಣಗಳು**

| ಕ್ರಮ ಸಂ. | ಹಳ್ಳಿ/ಪಟ್ಟಣದ ಹೆಸರು | ಕ್ರಮ ಸಂ. | ಹಳ್ಳಿ/ಪಟ್ಟಣದ ಹೆಸರು |
|---|---|---|---|
| 1. | ಶಿಪ್ಪೂರ | 22. | ಬೋರಗಲ್ |
| 2. | ಬಾಡ | 23. | ಬಾಡಹಟ್ಟಿ |
| 3. | ಕಣಗಲಿ | 24. | ಹಿಟ್ನಿ |
| 4. | ನಾಗನೂರ ಕೆ. ಎಸ್. | 25. | ಕಾಶಿಂಗ್ |
| 5. | ಮತ್ತಿವಡೆ | 26. | ಕರಜಗಾ |
| 6. | ಕೇಸ್ತಿ | 27. | ಅಮ್ಮಿನಭಾವಿ |
| 7. | ಹಂದಿಗೂಡ | 28. | ಅಮ್ಮಣಗಿ |
| 8. | ನಿಡಸೋಸಿ | 29. | ನಿಡಸೋಸಿ ವಾಡಿ |
| 9. | ಆಲೂರ ಕೆ. ಎಂ. | 30. | ಅಕ್ಕಿವಾಟ |
| 10. | ಹರಗಾಪೂರಗಡ | 31. | ಹರಗಾಪುರ |
| 11. | ಬುಗಟೆ ಆಲೂರ | 32. | ಬೈರಾಪುರ |
| 12. | ಕೋಣನಕೇರಿ | 33. | ಹೊನ್ನಿಹಳ್ಳಿ |
| 13. | ನೇರಲಿ | 34. | ಕಮತನೂರ |
| 14. | ಅಂಕಲಿ | 35 | ಹಡಲಗಾ |
| 15. | ಸೊಲ್ಲಾಪುರ | 36. | ಗೌನಾಳ |
| 16. | ಮಸಗುಪ್ಪಿ | 37. | ಗೋಟೂರು |
| 17. | ಸಂಕೇಶ್ವರ | 38. | ಹೆಬ್ಬಾಳ |
| 18. | ಕೋಚರಿ | 39. | ಅರ್ಜುನವಾಡ |
| 19. | ಚಿಕ್ಕಾಲಗುಡ್ಡ | 40. | ಕುರಣಿ |
| 20. | ಕುರಣಿವಾಡ | 41. | ಹಂಚಿನಾಳ |
| 21. | ಉಳ್ಳಾಗಡ್ಡಿ ಖಾನಾಪುರ | | |

**ಬಿ. ವಾಸುದೇವ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ.

**ಅಧಿಸೂಚನೆ ಸಂ: ಸಾರಿಇ 56 ಸಾಇಪ 2004, ದಿನಾಂಕ: 31.12.2004ಕ್ಕೆ ಅನುಬಂಧ-ಆ**

**ಯಮಕನಮರಡಿ ಹೋಬಳಿ ವ್ಯಾಪ್ತಿಗೆ ಬರುವ 25 ಹಳ್ಳಿ/ ಪಟ್ಟಣಗಳು**

| | | | |
|---|---|---|---|
| 1. | ಜಿರನಾಳ | 14. | ಬಿದ್ರೆವಾಡಿ |
| 2. | ಯಮಕನಮರಡಿ | 15. | ಮಾಣಗಾಂವ ದಡ್ಡಿ ಸೆಂಟರ್ |
| 3. | ಠಾಣಾಹತ್ತರಿಗಿ | 16. | ಆಲದಾಳ |
| 4. | ದಾದಬಾನಟ್ಟಿ ಹತ್ತರಗಿ ಮಜರೆ | 17. | ನಾಗನೂರ ಕೆ. ಡಿ. |
| 5. | ಠಾಣಾಹತ್ತರಿಗಿ ಆನಂದಪೂರ | 18. | ನಾಗನೂರ ಕೆ. ಎಂ. |
| 6. | ಹತ್ತರಗಿ ಪು. ಕೆ. | 19. | ದಡ್ಡಿ ರಾಮೇವಾಡಿ |

| | | | |
|---|---|---|---|
| 7. | ಮಣಗುತ್ತಿ | 20. | ದಡ್ಡಿ |
| 8. | ಬೋಳಶ್ಯಾನಹಟ್ಟಿ | 21. | ಗುಡಗನಟ್ಟಿ ಪುನರ್ವಸತಿ ಕೇಂದ್ರ |
| 9. | ಹುನ್ನೂರ ಮಾಸ್ತಿಹೊಳಿ | 22. | ಮೋದಗಾ |
| 10. | ಬೆನಕನಹೊಳಿ | 23. | ಖವಣೆವಾಡ |
| 11. | ಅತ್ತಿಹಾಳ | 24. | ಸಲಾಮವಾಡಿ |
| 12. | ಕೋಟ | 25. | ಶೆಟ್ಟಿಹಳ್ಳಿ |
| 13. | ದೊಂಡಹಟ್ಟಿ | | |

**ಬಿ. ವಾಸುದೇವ**

ಪಿ.ಆರ್.82 ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ.

**ಕರ್ನಾಟಕ ಸರ್ಕಾರದ ಸಚಿವಾಲಯ**

**ಅಧಿಸೂಚನೆ ಸಂ: ನಅಇ 435 ಬೆಮಪ್ರಾ 2003 ಬೆಂಗಳೂರು, ದಿನಾಂಕ: 24ನೇ ಡಿಸೆಂಬರ್ 2004**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ-19(7) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಅಧಿನಿಯಮ 19(1) ರನ್ವಯ ಸಂ. ನಅಇ 60 ಬೆಮಪ್ರಾ 2002, ದಿನಾಂಕ: 12.11.2003 ರಂದು ವಸತಿ ಯೋಜನೆಗಾಗಿ ಅಧಿಸೂಚನೆ ಹೊರಡಿಸಿರುವ ಜಮೀನುಗಳ ಪೈಕಿ ಈ ಕೆಳಗಿನ ಅನುಸೂಚಿಯಲ್ಲಿ ನಮೂದಿಸಿರುವ ಜಮೀನನ್ನು ಭೂಸ್ವಾಧೀನ ಪ್ರಕ್ರಿಯೆಯಿಂದ ಕೈಬಿಡಲಾಗಿದೆ.

**ಜಿಲ್ಲೆ:** ಧಾರವಾಡ **ತಾಲ್ಲೂಕು:** ಹುಬ್ಬಳ್ಳಿ **ಗ್ರಾಮ:** ಅಮರಗೋಳ

| ಅ. ಬಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು ಮತ್ತು ಇತರೆ ಚಿಕ್ಕುಗಳು ಮತ್ತು ಋಣಗಳು | ಸ. ನಂ. | ಜಮೀನಿನ ತರಹೆ | ಅವಶ್ಯವಿರುವ ಕ್ಷೇತ್ರ | ಆಕಾರ | ಚೆಕ್ಕುಬಂದಿ | | | |
|---|---|---|---|---|---|---|---|---|---|---|
| | | | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1. | ಗೋಡಿ ವುಳವಪ್ಪದ ತಂದೆ: ಪರಪ್ಪ ಸಾ: ರಾಯಾಪೂರ | ಸ್ವಂತ | 178 | ಖುಷ್ಕಿ | 05.29 | 5.51 | 163 | ರಾಯಪೂರ ಗಡಿ | ರಸ್ತೆ | 177 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.83 **ವಿ. ಶ್ರೀಧರಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರು ಇವರ ನ್ಯಾಯಾಲಯ**

**ಅಂತಿಮ ಆದೇಶ**

**ಸಂಖ್ಯೆ: ಎ8:71ಎ:ಅಮೊ:46/2003-04 ದಿನಾಂಕ: 28ನೇ ಡಿಸೆಂಬರ್ 2004**

**ವಿಷಯ :** ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ :** ಕರ್ನಾಟಕ ಅರಣ್ಯ ಕಾಯ್ದೆ 1963 ಕಾಲಂ 71 (ಎ) ಪ್ರಕಾರ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಈ ನ್ಯಾಯಾಲಯದಿಂದ ಹೊರಡಿಸಿರುವ ಆದೇಶ ದಿನಾಂಕ: 30.7.2004.

ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸಲುವಾಗಿ ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71 (ಎ) ಯಿಂದ 71 (ಜಿ) ವರೆಗೆ ಅನುಗುಣವಾಗಿ ಈ ನ್ಯಾಯಾಲಯದಲ್ಲಿ ನಡವಳಿಕೆಗಳನ್ನು ನಡೆಸಿ, ದಿನಾಂಕ: 30.7.2004 ರಂದು ಆದೇಶ ಹೊರಡಿಸಿ ಈ ಕೆಳಕಂಡ ವಾಹನಗಳನ್ನು ಮತ್ತು ಶ್ರೀಗಂಧ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಸೂಚನೆ ಹೊರಡಿಸಲಾಗಿತ್ತು. ಈ ಕೆಳಕಂಡ ವಾಹನಗಳು ಮತ್ತು ಶ್ರೀಗಂಧದ ಸಂಬಂಧದಲ್ಲಿ ಯಾವುದೇ ಹಕ್ಕು ಬಾಧ್ಯತೆ ರುಜುವಾತುಪಡಿಸಲು ಆದೇಶಿಸಿದ ವ್ಯಕ್ತಿಯು ದಿನಾಂಕ: 2.9.2004 ರ ಪ್ರಕಟಣೆಯ 30 ದಿನಗಳ ಒಳಗಾಗಿ ಈ ನ್ಯಾಯಾಲಯದ ಮುಂದೆ ಹಾಜರಾಗಿ ಅವರ ಹಕ್ಕು ಬಾಧ್ಯತೆ ಮತ್ತು ಮಾಲೀಕತ್ವವನ್ನು ರುಜುವಾತುಪಡಿಸಲು ತಿಳಿಸಲಾಗಿತ್ತು. ಸದರಿ ಪ್ರಕಟಣೆ ಪ್ರಕಟಗೊಂಡ 30 ದಿನಗಳ ಒಳಗಾಗಿ ಯಾವುದೇ ಅಹವಾಲು ಇಲ್ಲದಿದ್ದಲ್ಲಿ ಸರ್ಕಾರದ ಪರವಾಗಿ ಈ ಕೆಳಕಂಡ ವಾಹನಗಳು ಮತ್ತು ಅರಣ್ಯ ಉತ್ಪನ್ನವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದೆಂದು ಸಹ ತಿಳಿಸಲಾಗಿತ್ತು. ಈ ಆದೇಶವನ್ನು ಕರ್ನಾಟಕ ರಾಜ್ಯಪತ್ರದಲ್ಲಿ ದಿನಾಂಕ: 2.9.2004 ರಂದು ಭಾಗ-3 ರ ಪುಟ ಸಂಖ್ಯೆ: 1475 ರಲ್ಲಿ ಪ್ರಕಟಿಸಲಾಗಿದೆ.

ಮೇಲ್ಕಂಡ ಪ್ರಕಟಣೆಯು ದಿನಾಂಕ: 2.9.2004ರಲ್ಲಿ ಪ್ರಕಟಗೊಂಡು 30 ದಿನಗಳ ಒಳಗಾಗಿ ಯಾವುದೇ ಅಹವಾಲುಗಳು ಬಂದಿಲ್ಲವಾಗಿ ರುವುದರಿಂದಲೂ ಮತ್ತು ಯಾರೊಬ್ಬರೂ ಈವರೆಗೆ ಈ ಕೆಳಕಂಡ ವಾಹನಗಳು ಮತ್ತು ಅರಣ್ಯ ಉತ್ಪನ್ನವನ್ನು ತಮ್ಮದೆಂದು ರುಜುವಾತುಪಡಿಸಿರುವುದಿಲ್ಲ. ಸದರಿ ವಾಹನಗಳ ವಾರಸುದಾರರು ಈ ಅರಣ್ಯ ಅಪರಾಧದಲ್ಲಿ ಭಾಗಿಯಾಗಿಲ್ಲವೆಂದು ರುಜುವಾತುಪಡಿಸಿರುವುದಿಲ್ಲವಾದ್ದರಿಂದ ವಾಹನಗಳು ಹಾಗೂ ವಾಹನದ ವಾರಸುದಾರರು ಈ ಕೆಳಕಂಡ ಷೆಡ್ಯೂಲ್‌ನಲ್ಲಿರುವ ಅರಣ್ಯ ಅಪರಾಧದಲ್ಲಿ ಭಾಗಿಯಾಗಿರುತ್ತಾರೆಂದು ತಿಳಿದು ಬರುತ್ತದೆ. ಆದ್ದರಿಂದ ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71 (ಎ) ಯಿಂದ 71 (ಜಿ) ಪ್ರಕಾರ ಈ ಕೆಳಕಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಈ ಆದೇಶದ ಮೂಲಕ ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಈ ಆದೇಶದನ್ವಯ ಈ ಕೆಳಕಂಡ ವಾಹನಗಳು ಮತ್ತು ಅರಣ್ಯ ಉತ್ಪನ್ನದ ಮೇಲೆ ಈ ದಿನದಿಂದ ಯಾವ ವ್ಯಕ್ತಿಗೂ ಯಾವುದೇ ರೀತಿಯ ಹಕ್ಕು (ಸರ್ಕಾರ ಹೊರತುಪಡಿಸಿ) ಇರುವುದಿಲ್ಲ.

**ಷೆಡ್ಯೂಲ್**

| ಕ್ರ. ಸಂ. | ಅರಣ್ಯ ಮೊಕದ್ದಮೆ ಸಂಖ್ಯೆ | ವಾಹನದ ವಿವರ ನೋಂದಣಿ ಸಂಖ್ಯೆ | ಚಾಸಿಸ್ ಸಂಖ್ಯೆ | ಇಂಜಿನ್ ಸಂಖ್ಯೆ | ಉತ್ಪನ್ನದ ವಿವರ |
|---|---|---|---|---|---|
| 1 | 46/2003-04 1.4.2004 | TVS Champ KA-06-E-3582 1991 ಮಾದರಿ | D-10-4E 457015 | D-10-4m 483961 | 10 ಶ್ರೀಗಂಧದ ತುಂಡುಗಳು. |
| | | TVS-50-XL K-11-J-4608 1999 ಮಾದರಿ | 17908 M 188234 | 1790-SF 206877 | |

ದಿನಾಂಕ: 28.12.2004 ರಂದು ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

ಪಿ.ಆರ್.84 ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ.

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-560 001**

**ಪ್ರಕಟಣೆ ಸಂಖ್ಯೆ: ಕರಾಆ/ಆಡಳಿತ/27/2004 ದಿನಾಂಕ: 27ನೇ ಡಿಸೆಂಬರ್ 2004**

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರಡಿಯಲ್ಲಿ ರಚಿತಗೊಂಡು, ಗ್ರಾಹಕರ ವ್ಯಾಜ್ಯಗಳನ್ನು ಇತ್ಯರ್ಥಪಡಿಸುವ ನ್ಯಾಯಿಕ ಸ್ವರೂಪದ ಕೆಲಸಗಳನ್ನು ನಿರ್ವಹಿಸುತ್ತಿರುವ ಗುಲ್ಬರ್ಗಾ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ ಸ್ಥಾನಕ್ಕೆ ಸೂಕ್ತರಾದವರನ್ನು ಆಯ್ಕೆ ಮಾಡುವ ಸಲುವಾಗಿ ಈ ಮೂಲಕ ಅರ್ಜಿಯನ್ನು ಆಹ್ವಾನಿಸಲಾಗಿದೆ.

**ಜಿಲ್ಲಾ ವೇದಿಕೆಯ ಸದಸ್ಯರಾಗಿ ಆಯ್ಕೆ ಹೊಂದಲು ಈ ಕೆಳಕಂಡ ಅರ್ಹತೆಗಳು ಇರಬೇಕಾಗಿರುತ್ತದೆ.**

1) ಅರ್ಜಿಸಲ್ಲಿಸುವ ದಿನಾಂಕದಂದಿಗೆ 35 ವರ್ಷ ವಯಸ್ಸಾಗಿರಬೇಕು.
2) ಯಾವುದಾದರೂ ಅಂಗೀಕೃತ ವಿಶ್ವವಿದ್ಯಾನಿಲಯದ ಪದವೀಧರರಾಗಿರಬೇಕು.
3) ಪ್ರಾಮಾಣಿಕತೆ, ದಕ್ಷತೆ ಹಾಗೂ ನಿಷ್ಠೆ ಇರುವುದರ ಜೊತೆಗೆ ಅರ್ಥಶಾಸ್ತ್ರ/ ಕಾನೂನು/ ವಾಣಿಜ್ಯ/ ಲೆಕ್ಕಪತ್ರ/ ಕೈಗಾರಿಕೆ/ ಸಾರ್ವಜನಿಕ ವ್ಯವಹಾರಗಳು ಅಥವಾ ಸಾರ್ವಜನಿಕ ಆಡಳಿತ ಇವುಗಳಲ್ಲಿನ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಕನಿಷ್ಠ 10 ವರ್ಷಗಳ ಅನುಭವವುಳ್ಳವರಾಗಿರಬೇಕು.

ಮೇಲಿನ ಅರ್ಹತೆಯನ್ನು ಹೊಂದಿರುವವರು ಯಾವುದೇ ಶುಲ್ಕವಿಲ್ಲದಂತೆ ಅರ್ಜಿ ನಮೂನೆಗಳನ್ನು ಗುಲ್ಬರ್ಗಾ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ವಿಕಾಸ ಭವನದ ಆವರಣ, ಮೊದಲನೇ ಮಹಡಿ, ಲೇಬರ್ ಕೋರ್ಟ್ ಮೇಲ್ಭಾಗದಲ್ಲಿ, ಸ್ಟೇಷನ್ ರಸ್ತೆ, ಗುಲ್ಬರ್ಗಾ-585102 ಇಲ್ಲಿಂದ ಪಡೆದುಕೊಂಡು ಕ್ರಮಬದ್ಧವಾಗಿ ಭರ್ತಿ ಮಾಡಿದ ಅರ್ಜಿಗಳನ್ನು ದಿನಾಂಕ 29ನೇ ಜನವರಿ 2005ರ ಸಂಜೆ 5.00 ಗಂಟೆಯೊಳಗೆ ಗುಲ್ಬರ್ಗಾ ಜಿಲ್ಲಾ ವೇದಿಕೆಯಲ್ಲಿ ಸಲ್ಲಿಸತಕ್ಕದ್ದು.

ಮಾನ್ಯ ಅಧ್ಯಕ್ಷರ ಆದೇಶಾನುಸಾರ,
**ಶ್ರೀದೇವಿ ಎಸ್. ಅಂಗಡಿ**
ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು, ರಾಜ್ಯ ಗ್ರಾಹಕರ ಆಯೋಗ, ಬೆಂಗಳೂರು.

____________________ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ/ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷರ/ಸದಸ್ಯರ ನೇಮಕಾತಿಗೆ ಅರ್ಜಿ

(ಅಭ್ಯರ್ಥಿಯು ತನ್ನ ಸ್ವಂತ ಕೈಬರಹದಲ್ಲಿ ಭರ್ತಿ ಮಾಡತಕ್ಕದ್ದು)

ಅ. ಅರ್ಜಿಗಳನ್ನು ಕರೆದಿರುವ ರಾಜ್ಯ ಆಯೋಗದ ಅಧಿಸೂಚನೆ ಸಂಖ್ಯೆ ಮತ್ತು ದಿನಾಂಕ
ಆ. ಸದರಿ ಅಧಿಸೂಚನೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿರುವ ದಿನಾಂಕ
ಇ. ಸದರಿ ಅಧಿಸೂಚನೆ ದಿನಪತ್ರಿಕೆಗಳಲ್ಲಿ ಪ್ರಕಟವಾಗಿರುವ ದಿನಾಂಕ (ಯಾವ ಪತ್ರಿಕೆ, ಯಾವ ದಿನಾಂಕದಂದು, ಯಾವ ಪುಟ ಮತ್ತು ಯಾವ ಅಂಕಣ ಎಂಬುದನ್ನು ನಿರ್ದಿಷ್ಟಪಡಿಸಿ)

| |
|---|
| ಇತ್ತೀಚಿನ ಪಾಸ್‌ಪೋರ್ಟ್ ಸೈಜ್‌ನ ಭಾವಚಿತ್ರವನ್ನು ಲಗತ್ತಿಸಿ |

| | | |
|---|---|---|
| 1. | ಅಭ್ಯರ್ಥಿಯ ಪೂರ್ಣ ಹೆಸರು | ........................................................................<br>(ಸರ್‌ನೇಮ್) (ಹೆಸರು) |
| 2. | ನೀವು ನಿಮ್ಮ ಹೆಸರನ್ನು ಯಾವಾಗಲಾದರೂ ಬದಲಾಯಿಸಿಕೊಂಡಿದ್ದೀರಾ? ಹಾಗಿದ್ದಲ್ಲಿ, ಅದಕ್ಕೆ ಕಾರಣಗಳೊಂದಿಗೆ, ಪೂರ್ಣ ವಿವರಗಳನ್ನು ಮತ್ತು ಅದನ್ನು ಆಧರಿಸುವ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಒದಗಿಸುವುದು. (ಈ ಕಾಲಂನಲ್ಲಿ ಒದಗಿಸಿರುವ ಖಾಲಿ ಜಾಗ ಸಾಲದೇ ಇದ್ದ ಸಂದರ್ಭದಲ್ಲಿ, ಹೆಚ್ಚುವರಿ ಪುಟಗಳನ್ನು ಉಪಯೋಗಿಸಿ) | |
| 3. | **ವಿಳಾಸಗಳು:** | |
| ಅ. | ಹಾಲಿ ನಿವಾಸದ ವಿಳಾಸ, (ದೂರವಾಣಿ ಸಂಖ್ಯೆ, ಈ-ಮೇಲ್ ವಿಳಾಸ, ಫ್ಯಾಕ್ಸ್ ಸಂಖ್ಯೆಯೊಂದಿಗೆ) | (ಅ) |
| ಆ. | ನೀವು ಯಾವುದಾದರೂ ಉದ್ಯೋಗದಲ್ಲಿದ್ದೀರಾ ಅಥವಾ ಯಾವುದೇ ವೃತ್ತಿಯಲ್ಲಿದ್ದೀರಾ? ಹಾಗಿದ್ದಲ್ಲಿ ಪೂರ್ಣ ವಿವರಗಳನ್ನು ಕೊಡಿ. (ದೂರವಾಣಿ ಸಂಖ್ಯೆ, ಈ-ಮೇಲ್ ವಿಳಾಸ ಮತ್ತು ಫ್ಯಾಕ್ಸ್ ಸಂಖ್ಯೆ) | (ಅ) |

| | |
|---|---|
| 4. ತಂದೆಯ ಅಥವಾ ಪತಿಯ:<br>(ಅ) ಪೂರ್ಣ ಹೆಸರು<br>(ಆ) ಪ್ರಸ್ತುತ ನಿವಾಸದ ಪೂರ್ಣ ಅಂಚೆ ವಿಳಾಸ, ದೂರವಾಣಿ ಸಂಖ್ಯೆಯೊಂದಿಗೆ (ಬದುಕಿಲ್ಲದಿದ್ದರೆ, ಕೊನೆಯ ವಿಳಾಸವನ್ನು ನೀಡುವುದು)<br>(ಇ) ವೃತ್ತಿ-ವಿಳಾಸ ಮತ್ತು ದೂರವಾಣಿ ಸಂಖ್ಯೆಯೊಂದಿಗೆ (ಬದುಕಿಲ್ಲದಿದ್ದರೆ, ಕೊನೆಯ ವಿಳಾಸವನ್ನು ನೀಡುವುದು) | (ಅ)<br>(ಆ)<br>(ಇ) |
| 5. ಹುಟ್ಟಿದ ದಿನಾಂಕ (ಕ್ರಿಸ್ತಶಕದಲ್ಲಿ) ವಯಸ್ಸನ್ನು ರುಜುವಾತುಪಡಿಸಲು ಹುಟ್ಟಿದ ದಿನಾಂಕವನ್ನು ಒಳಗೊಂಡ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದ ದೃಢೀಕೃತ ಪ್ರತಿಯನ್ನು ಲಗತ್ತಿಸಿ. | |
| 6. (ಅ) ಜನ್ಮಸ್ಥಳ, ಜಿಲ್ಲೆ ಮತ್ತು ರಾಜ್ಯ.<br>(ಆ) ಪ್ರಸ್ತುತ ನೆಲೆಸಿರುವ ಜಿಲ್ಲೆ | (ಅ)<br>(ಆ) |
| 7. (ಅ) ನಿಮ್ಮ ಮತ<br>(ಆ) ನೀವು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ್ದೀರಾ? ಹೌದು ಅಥವಾ ಇಲ್ಲ ಎಂದು ಉತ್ತರಿಸುವುದು. ಉತ್ತರ ಹೌದು ಆಗಿದ್ದರೆ, ನೀವು ಸೇರಿರುವ ಸಮುದಾಯವನ್ನು ಹೆಸರಿಸುವುದು | (ಅ)<br>(ಆ) |

8. ಎಸ್.ಎಸ್.ಎಲ್.ಸಿ.ಯಿಂದ ಮೊದಲ್ಗೊಂಡು ವಿದ್ಯಾರ್ಹತೆ - ವಿದ್ಯಾಭ್ಯಾಸದ ಸ್ಥಳ, ವರ್ಷ, ಶಾಲೆ/ಕಾಲೇಜಿನ ವಿವರಗಳೊಂದಿಗೆ. (ದೃಢೀಕರಿಸಿದ ಪದವಿ/ಡಿಪ್ಲೊಮಾ ಪ್ರಮಾಣಪತ್ರಗಳ ಪ್ರತಿ ಲಗತ್ತಿಸುವುದು).

| ಶಾಲೆ/ಕಾಲೇಜು ಮತ್ತು ವಿಶ್ವವಿದ್ಯಾಲಯಗಳ ಹೆಸರು ಮತ್ತು ಪೂರ್ಣ ವಿಳಾಸ | ಪ್ರವೇಶದ ದಿನಾಂಕ | ನಿರ್ಗಮನದ ದಿನಾಂಕ | ತೇರ್ಗಡೆಯಾದ ಪರೀಕ್ಷೆ/ಪದವಿ ಹೆಸರು |
|---|---|---|---|
| | | | |

9. ನೀವು ಯಾವಾಗಲಾದರೂ ಉದ್ಯೋಗದಲ್ಲಿದ್ದಿದ್ದರೆ, ವಿವರ ಒದಗಿಸಿ.

| ಹುದ್ದೆಯ ಪದನಾಮ ಅಥವಾ ಕೆಲಸದ ವಿವರಣೆ | ಅವಧಿ | | ಕಚೇರಿ/ಸಂಸ್ಥೆಯ ಪೂರ್ಣ ವಿಳಾಸ | ಉದ್ಯೋಗವನ್ನು ತ್ಯಜಿಸಲು ಕಾರಣಗಳು |
|---|---|---|---|---|
| | ಇಂದ (ದಿನಾಂಕ) | ವರೆಗೆ (ದಿನಾಂಕ) | | |
| | | | | |

| | |
|---|---|
| 10. ನಿಮ್ಮ ಕಾಲೇಜು ಅಥವಾ ವಿಶ್ವವಿದ್ಯಾಲಯಕ್ಕೆ ಸಂಬಂಧಿಸದ ಮತ್ತು ನಿಮಗೆ ಸಂಬಂಧಿಕರಲ್ಲದ, ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ಪಡೆದ, ಚಾರಿತ್ರ್ಯ ಪ್ರಮಾಣಪತ್ರಗಳನ್ನು ಮೂಲ ಪ್ರತಿಯಲ್ಲಿ ಲಗತ್ತಿಸಿದ್ದೀರಾ? ಇಂತಹ ಪ್ರಮಾಣಪತ್ರ ಈ ಅರ್ಜಿಗೆ ಸಹಬಂಧಿಸಿರುವ ನಮೂನೆಯಲ್ಲಿ ಇರತಕ್ಕದ್ದು ಮತ್ತು ಅರ್ಜಿಯ ದಿನಾಂಕದ ಹಿಂದಿನ 6 ತಿಂಗಳ ಒಳಗೆ ಕೊಟ್ಟಂತಹ ಪ್ರಮಾಣಪತ್ರವಾಗಿರತಕ್ಕದ್ದು. | |
| 11. (ಅ) ನೀವು ಯಾವಾಗಲಾದರೂ ಅಭಿಯೋಜನೆಗೆ ಒಳಗಾಗಿದ್ದೀರಾ, ಬಂಧನಕ್ಕೆ ಒಳಗಾಗಿದ್ದೀರಾ ಅಥವಾ ಕಟ್ಟುಪಾಡಿಗೊಳಗಾಗಿದ್ದೀರಾ/ಜುಲ್ಮಾನೆಗೊಳಗಾಗಿದ್ದೀರಾ ಅಥವಾ ಯಾವುದೇ ನ್ಯಾಯಾಲಯದಿಂದ ಯಾವುದೇ ಅಪರಾಧಕ್ಕೆ ಅಪರಾಧಿಯೆಂದು ತೀರ್ಮಾನಿಸಲ್ಪಟ್ಟಿದ್ದೀರಾ?<br>(ಆ) ಈ ಅರ್ಜಿಯನ್ನು ಹಾಕುವ ಸಮಯದಲ್ಲಿ ನಿಮ್ಮ ವಿರುದ್ಧ ಯಾವುದೇ ನ್ಯಾಯಾಲಯದಲ್ಲಿ ಯಾವುದೇ ಪ್ರಕರಣ ಬಾಕಿ ಇದೆಯೇ?<br>(ಇ) ಮೇಲಿನ (ಅ) ಅಥವಾ/ಮತ್ತು (ಆ)ಗಳಿಗೆ ಯಾವುದಕ್ಕಾದರೂ ನಿಮ್ಮ ಉತ್ತರ ಹೌದು ಎಂದಾದರೆ, ಬಂಧನ/ಜುಲ್ಮಾನೆ, ಅಪರಾಧ ಸಿದ್ಧಿ, ದಂಡಾದೇಶ, ಮುಂತಾದ ವಿವರಗಳನ್ನು ಕೊಡುವುದು. | (ಅ)<br>(ಆ)<br>(ಇ) |

| | |
|---|---|
| 12. (ಅ) ನಿಮ್ಮನ್ನು ಯಾವಾಗಲಾದರೂ ಸೇವೆಯಿಂದ ವಜಾ (dismiss) ಮಾಡಲಾಗಿದೆಯೇ/ತೆಗೆದು ಹಾಕಲಾಗಿದೆಯೇ (removed)/ಹೊರ ಹಾಕಲಾಗಿದೆಯೇ (terminated)/ ಕಡ್ಡಾಯವಾಗಿ ನಿವೃತ್ತಿಗೊಳಿಸಲಾಗಿದೆಯೇ ಅಥವಾ ಸರ್ಕಾರಿ ಸೇವೆಗೆ ಪ್ರವೇಶ ಪಡೆಯದಂತೆ ನಿರ್ಬಂಧಿಸಲಾಗಿದೆಯೇ (debarred)<br>(ಆ) ಉತ್ತರ 'ಹೌದು' ಆದರೆ, ಪ್ರಕರಣದ ಪೂರ್ಣ ವಿವರಗಳನ್ನು, ಸಂಬಂಧಪಟ್ಟ ದಾಖಲೆಗಳ ದೃಢೀಕೃತ ಪ್ರತಿಗಳೊಂದಿಗೆ ಒದಗಿಸತಕ್ಕದ್ದು. ದುರ್ನಡತೆಗಾಗಿ ಅಂತಹ ವ್ಯವಹರಣೆಯನ್ನು ನಿಮ್ಮ ವಿರುದ್ಧ ನಡೆಸಲಾಗಿದ್ದಲ್ಲಿ, ಅದನ್ನು ಸ್ಪಷ್ಟವಾಗಿ ತಿಳಿಸತಕ್ಕದ್ದು. | (ಅ)<br>(ಆ) |
| 13. ಈ ಕೆಳಕಂಡ ದಾಖಲೆಗಳನ್ನು ಲಗತ್ತಿಸಲಾಗಿದೆಯೇ?<br>1) ವಯಸ್ಸನ್ನು ರುಜುವಾತುಪಡಿಸಲು ಜನ್ಮ ದಿನಾಂಕವನ್ನು ಒಳಗೊಂಡ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದ ದೃಢೀಕೃತ ಪ್ರತಿ.<br>2) ಹುದ್ದೆಗೆ ಬೇಕಾದ ವಿದ್ಯಾರ್ಹತೆ/ಅನುಭವಕ್ಕೆ ಸಂಬಂಧಿಸಿದ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿ. (ದಯವಿಟ್ಟು ಗ್ರಾಹಕ ಹಿತರಕ್ಷಣಾ ಅಧಿನಿಯಮ, 1986ರ ಸೆಕ್ಷನ್ 10/16ನ್ನು ನೋಡಿ). | |
| 14. ಅರ್ಜಿದಾರರು ವಕೀಲರಾಗಿದ್ದಲ್ಲಿ, ಅಧ್ಯಕ್ಷರು/ಸದಸ್ಯರಾಗಿ ಅವರ ನೇಮಕಾತಿಯ ನಂತರ, ಅವರ ಕೇಂದ್ರ ಸ್ಥಳವಾಗಬಹುದಾದ ಸ್ಥಳದಲ್ಲಿ, ಅವರ ಸಂಬಂಧಿಕರು ಯಾರಾದರೂ ವಕೀಲಿ ವೃತ್ತಿ ನಡೆಸುತ್ತಿದ್ದಾರೆಯೇ? ಹಾಗಿದ್ದಲ್ಲಿ, ವಿವರಗಳನ್ನು ಒದಗಿಸುವುದು. | |
| 15. ಅರ್ಜಿದಾರನ ಈಗಿನ ವಾರ್ಷಿಕ ವರಮಾನ-ವೃತ್ತಿ, ವ್ಯಾಪಾರ, ಕಸುಬು, ಉದ್ಯೋಗ, ವ್ಯವಹಾರ, ಆಸ್ತಿ ಬಾಡಿಗೆ/ಗುತ್ತಿಗೆ, ಮುಂತಾದವುಗಳಿಂದ ವಿವರಗಳನ್ನು ಒದಗಿಸುವುದು. | |
| 16. ಅರ್ಥಶಾಸ್ತ್ರ, ಕಾನೂನು, ವಾಣಿಜ್ಯ, ಲೇಖಾಶಾಸ್ತ್ರ, ಕೈಗಾರಿಕೆ, ಸಾರ್ವಜನಿಕ ವ್ಯವಹಾರಗಳು ಅಥವಾ ಆಡಳಿತ, ಇವುಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ನಿಮಗೆ ಇರುವ ಜ್ಞಾನ ಮತ್ತು/ಅಥವಾ ಅನುಭವ/ ಸಾಮರ್ಥ್ಯ ವಿವರ ನೀಡುವುದು. (ಯಾವುದಾದರೂ ಇದ್ದಲ್ಲಿ, ದೃಢೀಕರಿಸಿದ ದಾಖಲೆಗಳ ಪ್ರತಿ ಒದಗಿಸುವುದು), (ದಯವಿಟ್ಟು ಗ್ರಾಹಕ ಸಂರಕ್ಷಣಾ ಅಧಿನಿಯಮ, 1986ರ ಕಲಂ 10/16ರನ್ನು ನೋಡಿ) | |

**ಸೂಚನೆ:** "ದೃಢೀಕೃತ ಪ್ರತಿ" ಎಂದರೆ ರಾಜ್ಯ ಅಥವಾ ಕೇಂದ್ರ ಸರ್ಕಾರದ ಪತ್ರಾಂಕಿತ ಅಧಿಕಾರಿ ಅಥವಾ ಸಾರ್ವಜನಿಕ ನೋಟರಿ "ಯಥಾಪ್ರತಿ" ಎಂದು ಅನುಪ್ರಮಾಣಿಸಿದ ಸಂಬಂಧಪಟ್ಟ ದಾಖಲೆಯ ಛಾಯಾಪ್ರತಿ.

**ಅರ್ಜಿದಾರರಿಂದ ಘೋಷಣೆ**

__________________________________ ಎಂಬ ಹೆಸರಿನವನಾದ ನಾನು, ಮೇಲ್ಕಂಡ ಮಾಹಿತಿಯು, ನನ್ನ ಅತ್ಯುತ್ತಮ ಅರಿವು ಮತ್ತು ನಂಬಿಕೆಗಳಂತೆ, ಸರಿಯಾಗಿ ಹಾಗೂ ಸಂಪೂರ್ಣವಾಗಿರುವುದಾಗಿ ಈ ಮೂಲಕ ಘೋಷಿಸುತ್ತೇನೆ. ನೇಮಕಾತಿಗೆ ಯೋಗ್ಯತೆಯನ್ನು ದುರ್ಬಲಗೊಳಿಸುವ ಯಾವುದೇ ಸಂದರ್ಭಗಳು ನನಗೆ ತಿಳಿದಿರುವುದಿಲ್ಲ.

2. ನಾನು ಗ್ರಾಹಕ ಸಂರಕ್ಷಣಾ ಅಧಿನಿಯಮ, 1986 (ಕೇಂದ್ರ ಅಧಿನಿಯಮ ಸಂಖ್ಯೆ: 68/1986) ಮತ್ತು ಅದರಡಿ ರಚಿಸಲಾಗಿರುವ ರಾಜ್ಯ ಮತ್ತು ಕೇಂದ್ರದ ನಿಯಮಾವಳಿಗಳನ್ನು ಓದಿರುತ್ತೇನೆ. ಆ ಕಾನೂನುಗಳ ಅಡಿ ನಾನು *ಜಿಲ್ಲಾ ವೇದಿಕೆಯ/*ರಾಜ್ಯ ಆಯೋಗದ *ಅಧ್ಯಕ್ಷ/*ಸದಸ್ಯನಾಗಿ ನೇಮಕವಾಗಲು ಅರ್ಹತೆ ಹೊಂದಿರುವುದಾಗಿ ಘೋಷಿಸುತ್ತೇನೆ.

3. ನಾನು ಬಯಸುತ್ತಿರುವ ಸ್ಥಾನವು ಪೂರ್ಣಕಾಲಿಕ ಉದ್ಯೋಗ ಎಂಬುದನ್ನು ನಾನು ಅರಿತಿದ್ದೇನೆ. *ಅಧ್ಯಕ್ಷ/*ಸದಸ್ಯನಾಗಿ ನಾನು ನೇಮಕಗೊಂಡರೆ, ನನ್ನ ಪೂರ್ಣ ಕಾಲವನ್ನು ಅದಕ್ಕೆ ಸಮರ್ಪಿಸಲು ವಾಗ್ದಾನ ಮಾಡುತ್ತೇನೆ.

4. *ಅಧ್ಯಕ್ಷ/*ಸದಸ್ಯನಾಗಿ ನನ್ನ ಕಾರ್ಯಗಳ ಮೇಲೆ ಪ್ರತಿಕೂಲ ಪರಿಣಾಮ ಬೀರುವಂತಹ ಯಾವುದೇ ಹಣಕಾಸು ವ್ಯವಹಾರವನ್ನು ಅಥವಾ ಇತರ ಹಿತಾಸಕ್ತಿಯನ್ನು ನಾನು ಹೊಂದಿಲ್ಲ ಮತ್ತು ಹೊಂದುವುದಿಲ್ಲ.

*5. ನಾನು ವಕೀಲ ವೃತ್ತಿಯನ್ನು ________________________ ನಲ್ಲಿ (ಸ್ಥಳವನ್ನು ನಮೂದಿಸಬೇಕು) ನಡೆಸುತ್ತಿದ್ದು, ಈ ಅರ್ಜಿಯನ್ನು ಸಲ್ಲಿಸುತ್ತಿರುವ *ಅಧ್ಯಕ್ಷ/*ಸದಸ್ಯನಾಗಿ ಕಾರ್ಯನಿರ್ವಹಿಸುವ ಅವಧಿಗೆ, ಆ ವೃತ್ತಿಯನ್ನು ತ್ಯಜಿಸುತ್ತೇನೆ.

* ಅನ್ವಯಿಸದಿದ್ದಲ್ಲಿ ಹೊಡೆದುಹಾಕಿ.

ಸ್ಥಳ:
ದಿನಾಂಕ: ಅರ್ಜಿದಾರರ ಸಹಿ

